ಶಿವಾನುಭವ ಗ್ರಂಥಮಾಲಾ ಸಂ|| ೪೦

# ಅಂಬಿಗರ ಚೌಡಯ್ಯನ

## ವಚನಗಳು.



ಸಂಪಾದಕರು

ರಾ|| ಸಾ|| ಫ. ಗು. ಹಳಕಟ್ಟಿ

ಬಿ. ಎ. ಎಲ್. ಎಲ್. ಬಿ. ವಕೀಲ.

ವಿಜಾಪುರ.



ಬೆಲೆ ೧೪ ಆಣೆ.

# ಪ್ರಸ್ತಾವನೆ.



ಅಂಬಿಗರ ಚೌಡಯ್ಯನ ಈ ವಚನಗ್ರಂಥವನ್ನು ನಾವು ಬೇರೆ ಬೇರೆ ವಚನ ಸಂಗ್ರಹಗಳಲ್ಲಿ ದೊರೆದ ವಚನಗಳನ್ನು ಒತ್ತಟ್ಟಿಗೆ ಸಂಗ್ರಹಿಸಿ ಪ್ರಸಿದ್ಧಿಸಿದ್ದೇವೆ. ಈತನ ಸಮಗ್ರ ವಚನಗಳು ಒತ್ತಟ್ಟಿಗೆ ಎಲ್ಲಿಯೂ ಸಿಗುವದಿಲ್ಲ. ಅಂಬಿಗರ ಚೌಡಯ್ಯನ ವಚನಗಳೆಂದು ಅಚ್ಚುಹಾಕಿದ ಒಂದು ಪ್ರತಿಯು ಈಗ ದೊರೆಯುತ್ತಿದೆ. ಆದರೆ ಅದರಲ್ಲಿ ಕೆಲವು ವಚನಗಳು ಮಾತ್ರ ಈತನವು ಇದ್ದು ಉಳಿದವುಗಳೆಲ್ಲ ಬೇರೆ ಬೇರೆ ವಚನಕಾರರ ವಚನಗಳಿವೆ.

ನಮಗೆ ದೊರೆದ ವಚನಗಳನ್ನು ನಾವು ಶಕ್ಯವಿದ್ದಷ್ಟರ ಮಟ್ಟಿಗೆ ವಿಷಯಾನುಸಾರ ಸಂಗ್ರಹಿಸಿ ಈ ಪ್ರತಿಯನ್ನು ಸಿದ್ಧಪಡಿಸಿರುತ್ತೇವೆ. ಇದರಲ್ಲಿ ಪ್ರತಿಪಾದಿತವಾದ ವಿಷಯಗಳು ಪ್ರೌಢವೂ ಗಹನವೂ ಇರುತ್ತವೆ. ಅವು ಗಹನವಿದ್ದರೂ ಅವುಗಳನ್ನು ವಚನಕಾರನು ಅತ್ಯಂತ ಸ್ಫುಟವಾದ ರೀತಿಯಿಂದ ವಿವರಿಸಿರುತ್ತಾನೆ. ಅಂಬಿಗರ ಚೌಡಯ್ಯನ ವಚನಗಳು ವಚನ ಗ್ರಂಥಗಳಲ್ಲಿ ಅತ್ಯಂತ ಶ್ರೇಷ್ಠಸ್ಥಾನವನ್ನು ಹೊಂದಿರುತ್ತವೆ.

ಈ ವಚನಗಳಿಗೆ ಭಾವವನ್ನು ಬರೆಯುವದು ಬಹಳ ಅವಶ್ಯ ತೋರಿದ್ದರಿಂದ ಆ ಪ್ರಕಾರ ನಾವು ಪ್ರತಿಯೊಂದು ವಚನದ ಕೆಳಗೆ ಆದಷ್ಟು ಸಂಕ್ಷಿಪ್ತವಾಗಿ ಅದನ್ನು ಬರೆಯಲು ಪ್ರಯತ್ನಿಸಿದ್ದೇವೆ. ಈ ಮಹತ್ವದ ವಚನ ಗ್ರಂಥವು ಎಲ್ಲರಿಗೂ ಪ್ರಿಯವಾಗುವದೆಂದು ಹಾರೈಸಿದ್ದೇವೆ.

ವಿಜಾಪುರ
ತಾ॥ ೧೭-೩-೧೯೩೪

ಫ. ಗು. ಹಳಕಟ್ಟಿ
ಸಂಪಾದಕ.



ಅಂಬಿಗರ

# ಚೌಡಯ್ಯನ ವಚನಗಳು.

## ದೇವರ ಸ್ವರೂಪು.

ವಿವರಣೆ:— ದೇವರ ಸಂಬಂಧವಾಗಿ ಇಪ್ಪ ವಿಚಾರಗಳ ಮೇಲೆ ಧರ್ಮದ ಸ್ವರೂಪು ಅವಲಂಬಿಸಿರುತ್ತದೆ. ಹಿಂದೂಧರ್ಮದಲ್ಲಿ ಕಾಲ ಕಾಲಕ್ಕೆ ಅನೇಕ ಮತಗಳೂ ಸಿದ್ಧಾಂತಗಳೂ ಉಂಟಾಗಿವೆ. ಇವು ಉಂಟಾಗಲಿಕ್ಕೆ ದೇವರ ಸ್ವರೂಪದ ವಿಷಯದಲ್ಲಿ ಇರುವ ಭಿನ್ನಾಭಿಪ್ರಾಯಗಳೇ ಕಾರಣವಾಗಿವೆಂದು ಹೇಳಬಹುದು. ವೇದಕಾಲದಲ್ಲಿ ಆರ್ಯರು ಸೃಷ್ಟಿಯಲ್ಲಿ ಕಂಡುಬರುವ ಚಮತ್ಕಾರಗಳನ್ನು ನೋಡಿ ಅವೇ ದೇವರೆಂದು ಭಾವಿಸಿದರು. ಅದ್ದರಿಂದ ಋಕ್ಕುಗಳಲ್ಲಿ ಪರ್ಜನ್ಯ, ಅಗ್ನಿ, ವಾಯು, ವರುಣ, ಸೂರ್ಯ ಮೊದಲಾದವುಗಳ ಸ್ತೋತ್ರಗಳಿರುತ್ತವೆ. ಆದರೆ ಈ ವಿಚಾರಗಳು ಮುಂದೆ ಬರಬರುತ್ತ ಬದಲಾಗುತ್ತ ಹೋದವು. ಉಪನಿಷತ್ತಿನ ಕಾಲದಲ್ಲಿ ದೇವರು ಒಬ್ಬನೇ ಇದ್ದಾನೆ, ಮತ್ತು ಅವನು ಚರಾಚರ ವಸ್ತುಗಳಲ್ಲಿ ತುಂಬಿಕೊಂಡಿರುತ್ತಾನೆ ಎಂಬ ವಿಚಾರಗಳು ಹೊರಬೀಳಹತ್ತಿದವು. ಆಗ್ಗೆ ಹಿಂದೂ ಧರ್ಮದ ಸ್ವರೂಪದಲ್ಲಿ ಬದಲಾಯಿತು. ಮತ್ತು ಮುಂದೆ ಈ ಸ್ವರೂಪು ಪೌರಾಣಿಕ ಕಾಲದಲ್ಲಿ ಮತ್ತಿಷ್ಟು ಬದಲಾಯಿತು. ಆಗ್ಗೆ ಬ್ರಹ್ಮ, ವಿಷ್ಣು, ಶಿವ, ಪಾರ್ವತಿ, ಲಕ್ಷ್ಮೀ ಎಂಬ ಮೊದಲಾದ ಅನೇಕ ದೇವತೆಗಳು ಪ್ರಾದುರ್ಭಾವ ಹೊಂದಿದವು. ಆಗ ಅವುಗಳ ಬಗ್ಗೆ ಅನೇಕ ಕಟ್ಟುಕಥೆಗಳು ಉತ್ಪನ್ನವಾದವು. ಈ ಕಥೆಗಳಿಗನುಸರಿಸಿ ಆಯಾ ದೇವತೆಗಳ ನಾನಾಬಗೆಯ ಆರಾಧನೆಗಳೂ ಪ್ರಾರಂಭವಾದವು. ಹೀಗೆ ದೇವರ ಸಂಬಂಧದ ವಿಚಾರಗಳಲ್ಲಿ ಹೆಚ್ಚುಕಡಿಮೆಯಾದ ಹಾಗೆ ಮೋಕ್ಷದ ಕಲ್ಪನೆಯೂ ಆಚಾರ ವಿಚಾರಗಳ ಪದ್ಧತಿಯೂ ಬದಲಾಗುವದು ತೋರಿಬರುತ್ತದೆ. ಆದರೆ ವೀರಶೈವರಲ್ಲಿರುವ ದೇವರ ಸಂಬಂಧದ ವಿಚಾರಗಳು ಉಪನಿಷತ್ತಿನ ಕಾಲದ ವಿಚಾರಗಳಿಗೆ ಬಹಳ ಹೋಲುತ್ತವೆ. ಅವರು ಪರಮಾತ್ಮನು ಒಬ್ಬನೇ ಇದ್ದಾನೆ, ಅವನು ವಿಶ್ವದಲ್ಲೆಲ್ಲ ಭರಿತ

ನಾಗಿದ್ದಾನೆ ಎಂದು ಭಾವಿಸಿರುವರು. ಈ ವಿಚಾರಗಳನ್ನೇ ವಚನಕಾರರು ಯಾವಾಗಲೂ ಸಮರ್ಥಿಸುತ್ತ ಬಂದಿದ್ದಾರೆ. ಅಂಬಿಗರ ಚೌಡಯ್ಯನಾದರೂ ಹೀಗೆಯೇ ತನ್ನ ವಚನದಲ್ಲಿ ಹೇಳಿರುವನು. ಅವನು ಅನ್ನುವದೇನೆಂದರೆ,

ವಚನಃ— ೧. ಗಂಧವ ವಾಯು ಕೊಂಬಾಗ ಅದ ತಂದು ಊದಿದವರಾರು? ಮರಕ್ಕೆ ಸುಗಂಧ ನಿಂದುದಾಗ ಅದ ಬಂಧಿಸಿ ತಂದು ಇರಿಸಿದವರಾರು? ಅವು ತಮ್ಮ ಲಿಂಗದ ಭಾವದಂತೆ ನಿಂದ ನಿಜವೆ ತಾವಾಗಿ ಬೇರೊಂದು ಸಂದಿಸಲಿಲ್ಲೆಂದಾತ ನಮ್ಮ ಅಂಬಿಗರ ಚೌಡಯ್ಯನು

ಭಾವಃ— ಜಗತ್ತಿನಲ್ಲಿ ಅನೇಕ ಸೃಷ್ಟಿ ಚಮತ್ಕಾರಗಳು ಕಂಡು ಬರುತ್ತವೆ. ಈ ಚಮತ್ಕಾರಗಳಲ್ಲಿ ವಾಡಿಕೆಯಾಗಿ ಕಂಡುಬರುವಂಥ ಕೆಲವುಗಳನ್ನು ಅಂಬಿಗರಚೌಡಯ್ಯನು ಇಲ್ಲಿ ವಿವರಿಸಿ ದೇವರ ಸಂಬಂಧದ ತನ್ನ ವಿಚಾರಗಳನ್ನು ಹೊರಗೆಡವಿರುವನು. ಅವನು ಅನ್ನುವದೇನಂದರೆ- ಸುಗಂಧದಿಂದ ಕೂಡಿಕೊಂಡು ವಾಯುವು ಬೀಸುತ್ತದೆ. ಎಂದರೆ ಈ ಸುಗಂಧವನ್ನು ಒಳಕೊಳ್ಳುವ ಗುಣವು ಆ ವಾಯುವಿನಲ್ಲಿ ಇದೆ. ಹಾಗೆಯೇ ಮರದಲ್ಲಿಯೂ ಈ ಸುಗಂಧವು ಉಂಟು. ಎಂದರೆ ಈ ಗುಣವು ಅದರಲ್ಲಿ ಸ್ವಾಭಾವಿಕವಾಗಿಯೇ ತಲೆದೋರಿರುತ್ತದೆ. ಹೀಗೆ ಜಗತ್ತಿನಲ್ಲಿ ಅನೇಕ ಬಗೆಯ ಗುಣಗಳು ಮತ್ತು ವ್ಯಾಪಾರಗಳು ತೋರಿಬರುತ್ತವೆ. ಇವುಗಳು ಹ್ಯಾಗೆ ಉತ್ಪನ್ನವಾಗುತ್ತವೆಂಬದನ್ನು ಕುರಿತು ಅಂಬಿಗರ ಚೌಡಯ್ಯನು ಇಲ್ಲಿ ಆಲೋಚಿಸಿ ಅಭಿಪ್ರಾಯಪಡುವದೇನಂದರೆ, "ಅವು ತಮ್ಮ ಲಿಂಗದ ಭಾವದಂತೆ ನಿಂದ ನಿಜ" ವೆಂತಲೂ ಆ "ನಿಜವೇ ತಾವಾಗಿ" ವ್ಯವಹರಿಸುತ್ತವೆಂತಲೂ, ಇದರಲ್ಲಿ "ಬೇರೊಂದು ಸಂದಿಸಲಿಲ್ಲ" ವೆಂತಲೂ ಅನ್ನುತ್ತಾನೆ. ಇದರಿಂದ ವಚನಕಾರನ ಭಾವವು ಕಂಡು ಬರುವದೇನಂದರೆ, ಲಿಂಗವು ಜಗತ್ತಿನಲ್ಲೆಲ್ಲ ತುಂಬಿಕೊಂಡಿದ್ದು ಈ ಕಳೆಯೇ ಆ ಪದಾರ್ಥಗಳ ನಿಜತ್ವವೆಂದು ತಿಳಿಯತಕ್ಕದ್ದು. ಎಂದರೆ ಆ ಪದಾರ್ಥಗಳ ನಿಜವಾದ ಸ್ವರೂಪು ಲಿಂಗವೇ ಎಂದು ಅವನ ಭಾವವು. ಮತ್ತು ಈ ನಿಜವೇ ಆ ಪದಾರ್ಥಗಳ ವ್ಯಾಪಾರಕ್ಕೆ ಕಾರಣವಾಗಿರುತ್ತದೆ. ಆದ್ದರಿಂದ ಈ ನಿಜವೇ ತಾನಾಗಿ ಆ ಪದಾರ್ಥದಲ್ಲಿ ವ್ಯವಹರಿಸುತ್ತದೆಂದು ಹೇಳಿರುವನು. ಈ ಪ್ರಕಾರ ಪದಾರ್ಥಗಳ ಸ್ಥಿತಿಗೆ ಲಿಂಗತತ್ವವೇ

ಕಾರಣವೇ ಹೊರ್ತು ಉಳಿದವು ಯಾವವೂ ಅಲ್ಲವೆಂದು ವಚನಕಾರನ ಮುಖ್ಯ ಭಾವವಾಗಿದೆ.

ಎಂದರೆ ಪರಮಾತ್ಮನು ಜಗತ್ತಿನಲ್ಲೆಲ್ಲ ತುಂಬಿಕೊಂಡಿರುವನು, ಜಗತ್ತಿನಲ್ಲಿ ಕಂಡುಬರುವ ವ್ಯಾಪಾರಗಳಿಗೆ ಅವನೇ ಕಾರಣನು, ಅವನಿಂದಲೇ ಅವು ನಡಿಯುತ್ತವೆ. ಮತ್ತು ಪರಮಾತ್ಮನಾದರೂ ಅವುಗಳಲ್ಲಿ ಬೆರೆದು ವ್ಯವಹರಿಸುತ್ತಾನೆ ಎಂಬ ಭಾವವನ್ನು ವ್ಯಕ್ತಪಡಿಸಿರುವನು.

ವಚನಃ— ೨. ಅಸುರರ ಮಾಲೆಗಳಿಲ್ಲ, ತ್ರಿಶೂಲ ಡಮರುಗವಿಲ್ಲ, ಬ್ರಹ್ಮಕಪಾಲವಿಲ್ಲ, ಭಸ್ಮಭೂಷಣನಲ್ಲ, ವೃಷಭವಾಹನನಲ್ಲ, ಋಷಿಗಳೊಡನೆ ಇದ್ದಾತನಲ್ಲ. ಎಸಗುವ ಸಂಸಾರದ ಕುರುಹಿಲ್ಲದಾತಂಗೆ ಹೆಸರಾವುದು ಇಲ್ಲವೆಂದನಂಬಿಗಚೌಡಯ್ಯ.

ಭಾವಃ— ಈ ವಚನದಲ್ಲಿ ಅಂಬಿಗರ ಚೌಡಯ್ಯನು ಶಿವ, ಪಾರ್ವತಿ ಮೊದಲಾದ ದೇವತೆಗಳನ್ನು ನಿರಾಕರಿಸಿರುವನು. ವೀರಶೈವರು ತಾವು ಶಿವನನ್ನು ಮಾತ್ರ ಪೂಜಿಸುವರೆಂದು ತಿಳಿಯುವದುಂಟು. ಮತ್ತು ಶಿವನು ರುಂಡಮಾಲಾಧರನು, ತ್ರಿಶೂಲಧರನು, ಡಮರುಗವುಳ್ಳವನು, ಬ್ರಹ್ಮಕಪಾಲವನ್ನು ಧರಿಸಿದವನು, ಭಸ್ಮಭೂಷಿತನು, ವೃಷಭವಾಹನನು, ಪಾರ್ವತೀಪತಿಯು ಎಂದು ಮೊದಲಾಗಿ ಹೇಳುವದುಂಟು. ಆದರೆ ಈ ವಿಚಾರಗಳನ್ನೆಲ್ಲ ಅಂಬಿಗರ ಚೌಡಯ್ಯನು ಅಲ್ಲಗಳೆದಿರುವನು. ಅಂಬಿಗರ ಚೌಡಯ್ಯನು ಈ ಬಗೆಯ ವಿಚಾರಗಳು ಸಂಸಾರಿಕರಿಗೆ ಮಾತ್ರ ಯೋಗ್ಯವಾದವುಗಳಿದ್ದು, ಸಂಸಾರಕ್ಕೆ ದೂರವಾಗಿರುವ ಪರಮಾತ್ಮನಿಗೆ ಇಂಥ ಸಂಗತಿಗಳನ್ನು ಸಂಬಂಧಿಸುವದು ಯೋಗ್ಯವಲ್ಲವೆಂದು ಅವನ ಅಭಿಪ್ರಾಯವು. ಪರಮಾತ್ಮನಲ್ಲಿ ಸಂಸಾರದ ಕುರುಹು ಏನೂ ಇಲ್ಲ, ಮತ್ತು ಅವನು ನಾಮರೂಪಕ್ಕೆ ಹೊರತಾಗಿರುವನೆಂದು ಅವನು ಈ ವಚನದಲ್ಲಿ ಹೇಳಿರುವನು. ಈ ಬಗೆಯ ವಿಚಾರಗಳನ್ನು ವಚನಕಾರರೆಲ್ಲರೂ ತಮ್ಮ ವಚನಗಳಲ್ಲಿ ಹೇಳಿರುತ್ತಾರೆ.

ವಚನಃ— ೩. ಅಂಗದೊಳಗಿಪ್ಪುದು ಲಿಂಗವಲ್ಲ. ಅಂಗದ ಹೊರಗಿಪ್ಪುದು ಲಿಂಗವಲ್ಲ. ಎಲ್ಲ ಅಂಗಂಗಳನೊಳಕೊಂಡಿಪ್ಪ ಲಿಂಗ ಹೋಗುತ್ತ ಬರುತ್ತಿಹುದಲ್ಲ. ಚಲನೆ ಇಲ್ಲದ ಅಚಲವಪ್ಪ ಲಿಂಗಕ್ಕೆ ಬಂದಿತ್ತು ಹೋಯಿತ್ತು ಎಂಬ ಸಂದೇಹವಿಲ್ಲವೆಂದ ನಂಬಿಗಚೌಡಯ್ಯ.

ಭಾವಃ— ಅನೇಕರು ಲಿಂಗವು ಎಂದರೆ ಪರಮಾತ್ಮನು ಇಂಥ ಒಂದು ಸ್ಥಳದಲ್ಲಿ ಇರುವನು ಮತ್ತು ಇಂಥ ಒಂದು ಸ್ಥಳದಲ್ಲಿ ಇರುವದಿಲ್ಲ ಎಂದು ಭಾವಿಸುವದುಂಟು. ಇದು ತಪ್ಪೆಂದು ವಚನಕಾರನು ಇವರಲ್ಲಿ ಅಂದಿರುವನು. ಲಿಂಗವು ಅಂಗದಲ್ಲಿ ಇರುತ್ತದೆಂದು ಭಾವಿಸಿದರೆ ಅದು ತಪ್ಪು. ಹಾಗೆಯೇ ಅದು ಅಂಗದ ಹೊರಗಿರುತ್ತದೆಂದು ಭಾವಿಸಿದರೆ ಅದೂ ತಪ್ಪು. ಯಾಕೆಂದರೆ ಲಿಂಗವು ಅಂಗದ ಒಳಗೂ ಹೊರಗೂ ಕೂಡಿಯೇ ವ್ಯಾಪಿಸಿರುತ್ತದೆ. ಅದ್ದರಿಂದ ಲಿಂಗವು ಹೋಗುವದೂ ಇಲ್ಲ, ಬರುವದೂ ಇಲ್ಲ. ಅದಕ್ಕೆ ಚಲನೆ ಇಲ್ಲ, ಅಚಲವಾಗಿದೆ. ಯಾವ ವಸ್ತುವು ಯಾವತ್ತು ಸ್ಥಳದಲ್ಲಿ ನಿಬಿಡವಾಗಿ ತುಂಬಿಕೊಂಡಿರುತ್ತದೋ ಅಂಥ ವಸ್ತುವಿಗೆ ಹೋಗಲಿಕ್ಕೂ ಬರಲಿಕ್ಕೂ ಸ್ಥಳವು ಹ್ಯಾಗೆ ದೊರಕಬಹುದು? ಇದು ಅಶಕ್ಯವೆಂದು ವಚನಕಾರನು ಇಲ್ಲಿ ಅಂದಿರುವನು. ಪರಮಾತ್ಮನು ವಿಶ್ವದಲ್ಲೆಲ್ಲ ಭರಿತನಾಗಿರುತ್ತಾನೆಂದು ಹೇಳುವದೇ ಅವನ ಮುಖ್ಯ ಭಾವವಾಗಿದೆ.

ವಚನಃ— ೪. ಅಗ್ನಿ ದಿಟವೆಂದೊಡೆ ತಾ ಹುಸಿ ಕಾಷ್ಠವಿಲ್ಲದೆ. ಕಾಷ್ಠದಲ್ಲಡಗಿ ಸುಡದಿಪ್ಪ ಭೇದವನರಿತಡೆ ಪ್ರಾಣಲಿಂಗಿ ಎಂದೆಂಬೆನೆಂದ ನಂಬಿಗಚೌಡಯ್ಯ.

ಭಾವಃ— ವಚನಕಾರನು ಈ ವಚನದಲ್ಲಿ ಪರಮಾತ್ಮನಿಗೂ ಪದಾರ್ಥಗಳಿಗೂ ಇರುವ ಸಂಬಂಧವನ್ನು ನಿರ್ದೇಶಿಸಿರುವನು. ಅವನು ಅನ್ನುವದೇನೆಂದರೆ ಪರಮಾತ್ಮನು ಜಗತ್ತಿನಲ್ಲಿ ತುಂಬಿಕೊಂಡಿರುವದೇನೋ ನಿಜವು. ಆದರೆ ಅವನು ಅದರಲ್ಲಿ ಪ್ರಕಟವಾಗಿರದೆ, ಗುಪ್ತರೀತಿಯಿಂದ ತನ್ನನ್ನು ತೋರಿಸಿಕೊಳ್ಳದೆ ವಾಸಿಸುತ್ತಾನೆಂಬವನ್ನು ಅವನು ಒಂದು ದೃಷ್ಟಾಂತದ ಮೂಲಕ ಹೇಳಿರುವನು. ಜಗತ್ತು ಮತ್ತು ಪರಮಾತ್ಮ ಇವು ಒಂದನ್ನೊಂದು ಬಿಟ್ಟಿರಲಾರವು. ಅಂಗವಿಲ್ಲದೆ ಲಿಂಗವಿಲ್ಲ, ಲಿಂಗವಿಲ್ಲದೆ ಅಂಗವಿಲ್ಲವೆಂಬು ವೀರಶೈವರ ತತ್ವವಿದೆ ಅಗ್ನಿಯ ಅಸ್ತಿತ್ವವು ನಿಃಸಂದೇಹವು. ಆದರೆ ಅದು ಕಾಷ್ಠವಿಲ್ಲದೆ ಪ್ರಕಟವಾಗದು. ಹಾಗೆಯೇ ಪರಮಾತ್ಮನಿರುವದೇನೋ ನಿಜವು. ಆದರೆ ಆತನು ಅಂಗವಿಲ್ಲದೆ ತೋರಿಸಿಕೊಳ್ಳಲಾರನು. ಅವನು ಅದರಲ್ಲಿ ಹ್ಯಾಗೆ ಹುದುಗಿಕೊಂಡು ಗುಪ್ತ

ವಾಗಿ ವಾಸಿಸುತ್ತಾನೋ ಹಾಗೆಯೇ ಪರಮಾತ್ಮನು ಜಗತ್ತಿನಲ್ಲಿ ತನ್ನನ್ನು ಕಾಣಿಸಿಕೊಳ್ಳದೆ ವಾಸಿಸುತ್ತಾನೆಂದು ಈ ವಚನದ ತಾತ್ಪರ್ಯವು.

ವಚನ:- ೫ ಅಡವಿಯೊಳಗರಸುವಡೆ ಸಿಡಿಗಂಟೆ ತಾನಲ್ಲ. ಮಡುವಿನೊಳಗರಸುವಡೆ ಮತ್ಸ್ಯಮಂಡುಕನಲ್ಲ. ಒಡಲ ದಂಡಿಸುವಡೆ ಕೊಡುವ ಸಾಲಿಗನಲ್ಲ. ಅಷ್ಟತನುವಿನೊಳಗೆ ಹುದುಗಿರ್ಪ ಲಿಂಗವ ನಿಲುಕಿ ನೋಡಿಯೇ ಕಂಡನಂಬಿಗ ಚೌಡಯ್ಯ,

ಭಾವ:--- ವಚನಕಾರನು ಲಿಂಗದ ಸ್ಥಿತಿಯನ್ನು ಹಿಂದಿನ ವಚನಗಳಲ್ಲಿ ವಿವರಿಸಿ, ಅವನನ್ನು ಎಲ್ಲಿ ಹುಡುಕಬೇಕೆಂಬದನ್ನು ಮೇಲಿನ ವಚನದಲ್ಲಿ ಹೇಳಿರುವನು. ಅನೇಕರು ಪರಮಾತ್ಮನು ಅಡವಿಯಲ್ಲಿರುತ್ತಾನೆಂದು ಭಾವಿಸಿ ಅಲ್ಲಿಗೆ ಹೋಗುವದುಂಟು. ಆದರೆ ಅಡವಿಯಲ್ಲಿ ಸಿಡಿಗಂಟೆ ಮೊದಲಾದ ವನಸ್ಪತಿಗಳನ್ನು ಮಾತ್ರ ಕಾಣಬಹುದು. ಆದರೆ ಅಲ್ಲಿ ಪರಮಾತ್ಮನು ಕಾಣಲಾರನು. ಅನೇಕರು ಪರಮಾತ್ಮನನ್ನು ಕಾಣಬೇಕೆಂದು ಹಳ್ಳ, ಕೊಳ್ಳ, ಕೆರೆ, ತೊರೆ, ತೀರ್ಥಯಾತ್ರೆಗಳಿಗೆ ಹೋಗುವದುಂಟು. ಆದರೆ ಈ ಕೆರೆತೊರೆಗಳಲ್ಲಿ ಮೀನುಕಪ್ಪೆಗಳು ಕಾಣಬಹುದೇ ಹೊರ್ತು ಪರಮಾತ್ಮನು ಅಲ್ಲಿ ಕಾಣಲಾರನು. ಇನ್ನು ಅನೇಕರು ತಮ್ಮ ದೇಹದ ದಂಡನೆಯನ್ನು ಮಾಡಿದ್ದಾದರೆ ಪರಮಾತ್ಮನು ಕಾಣುವನೆಂದು ತಿಳಿಯುವದುಂಟು. ಇದೂ ತಪ್ಪೆಂದು ವಚನಕಾರನ ಅಭಿಪ್ರಾಯವು. ಸಾಹುಕಾರರು ಸಾಲಿಗರನ್ನು ಹಿಡಿದು ಅವರನ್ನು ಶಿಕ್ಷಿಸಿ ಧನವನ್ನು ವಸೂಲು ಮಾಡಿಕೊಳ್ಳಬಹುದು. ಆದರೆ ಹೀಗೆ ದೇಹ ದಂಡನೆ ಮಾಡಿದ್ದಾದರೆ ಪರಮಾತ್ಮನು ಸಿಕ್ಕಲಾರನು. ಪರಮಾತ್ಮನು ಬೇರೆ ಇಂಥ ವಿಶಿಷ್ಟ ಸ್ಥಾನದಲ್ಲಿ ಎಲ್ಲಿಯೂ ಇಲ್ಲ. ಆದರೆ ಅವನು ಅಷ್ಟತನುವಿನಲ್ಲಿಯೇ ಇದ್ದಾನೆ. ಅವನು ತನ್ನ ಶರೀರದಲ್ಲಿಯೇ ವಾಸವಾಗಿದ್ದಾನೆ. ಇಲ್ಲಿಯೇ ಲಿಂಗವು ಹುದುಗಿರ್ದು ಆ ಲಿಂಗವನ್ನು ಇದರಲ್ಲಿ ಇಣಿಕಿ ಹಾಕಿ ನೋಡುತ್ತೇನೆಂದು ವಚನಕಾರನು ಚೇಷ್ಟೆಯಿಂದ ಅಂದಿರುವನು.

ವಚನ:--- ೬. ಮನದಲ್ಲಿ ನೆನೆಯೆ. ವಚನಕ್ಕೆ ತಾರೆ. ಪಾಷಾಣವ ಪೂಜಿಸೆ. ಹೊಡೆಹೊಂಟು ಬೇರುಮಾಡೆ. ತಾಯ ಬಸುರೊಳಗಿರ್ದು ಕಾಲನಿಡುವ ಬುದ್ಧಿ ಕೊಡದು, ಕೊಡದೆಂದನಂಬಿಗರ ಚೌಡಯ್ಯ.

ಭಾವಃ— ವಚನಕಾರನು ಪರಮಾತ್ಮನನ್ನು ತನ್ನಲ್ಲಿ ಹ್ಯಾಗೆ ಇಣಕಿ ಹಾಕಿ ನೋಡಬೇಕೆಂಬದನ್ನು ಇದರಲ್ಲಿ ಸ್ವಲ್ಪ ನಿರ್ದೇಶಿಸಿರುವನು. ಅನೇಕರು ಪರಮಾತ್ಮನನ್ನು ಧ್ಯಾನಿಸಿ ಧ್ಯಾನಿಸಿ ಅವನನ್ನು ಕಾಣುವೆನೆಂದು ಸದಾ ಸ್ಮರಣೆಮಾಡುವದುಂಟು. ಇದು ತಪ್ಪೆಂದು ವಚನಕಾರನ ಅಭಿಪ್ರಾಯವು. ಆದ್ದರಿಂದ ನಾನು ಪರಮಾತ್ಮನನ್ನು ಧ್ಯಾನಿಸಲಾರೆನೆಂದು ಅವನು ಇದರಲ್ಲಿ ಅಂದಿರುವನು. ಅನೇಕರು ಪರಮಾತ್ಮನನ್ನು ಹೊಗಳಿ ಹೊಗಳಿ ಅವನ ಪ್ರೀತಿಯನ್ನು ಸಂಪಾದಿಸುವೆವೆಂದು ಭಾವಿಸಿರುವರು. ಇದೂ ತಪ್ಪಾದದ್ದು. ಬೇರೆ ಅನೇಕರು ಅವನ ಮೂರ್ತಿಯನ್ನು ಮಾಡಿ ಅನೇಕ ರೀತಿಯಿಂದ ಪೂಜಿಸುವದುಂಟು. ಇದೂ ತಪ್ಪೆಂದು ವಚನಕಾರನ ಅಭಿಪ್ರಾಯವು. ಹೀಗೆ ಪ್ರಯತ್ನಿಸುವದೆಂದರೆ ಪರಮಾತ್ಮನು ತನ್ನಿಂದ ಬೇರೆಯಾದ ಒಂದು ವಸ್ತುವಿದೆ ಎಂದು ತಿಳಿದು ಅವನನ್ನು ಹುಡುಕುವಂತೆಯೇ ಸರಿ. ಈ ರೀತಿಯಿಂದ ಪರಮಾತ್ಮನು ಸಿಕ್ಕಲಾರನೆಂದು ವಚನಕಾರನ ಭಾವವು. ಮನುಷ್ಯನು ಗರ್ಭಿಣೀ ಸ್ತ್ರೀಯಲ್ಲಿದ್ದ ಶಿಶುವಿನಂತೆ ಇದ್ದಾನೆಂದು ಅವನು ಒಂದು ದೃಷ್ಟಾಂತವನ್ನು ಇಲ್ಲಿ ಹೇಳಿರುವನು. ಹ್ಯಾಗೆ ಗರ್ಭಿಣೀ ಸ್ತ್ರೀಯು ತನ್ನ ರಕ್ತ ಮತ್ತು ಸಾಮರ್ಥ್ಯವನ್ನು ಕೊಟ್ಟು ಶಿಶುವನ್ನು ಸಂರಕ್ಷಿಸುತ್ತಾಳೋ ಹಾಗೆಯೇ ಮನುಷ್ಯನು ಪರಮಾತ್ಮನಲ್ಲಿದ್ದು ಅವನಿಂದ ರಕ್ಷಣ್ಯವನ್ನು ಹೊಂದುತ್ತಾನೆ. ಎಂದರೆ ಪರಮಾತ್ಮನ ಅಂಶದಿಂದಲೇ ಅವನು ಪೋಷಣೆಹೊಂದುತ್ತಾನೆ. ಆದ್ದರಿಂದ ನಾನು ಸ್ವತಂತ್ರನು, ನಾನು ಪರಮಾತ್ಮನ ಸಂಬಂಧವನ್ನು ಬಿಟ್ಟುಕೊಟ್ಟು ಸಂಚರಿಸುವೆನು ಎಂದು ಹೇಳಿದ್ದಾದರೆ ಅವನು ಗತಿಗೆ ಮುಟ್ಟಲಾರನು. ಈ ಸಂಗತಿಯನ್ನು ಅಂಬಿಗರಚೌಡಯ್ಯನು ಇದರಲ್ಲಿ ಹೇಳಿ, ಹಾಗೆ ಮಾಡಕೂಡದೆಂದು ಉಪದೇಶಿಸಿರುವನು.

---

## ದೇವರು ಒಬ್ಬನೇ ಇದ್ದಾನೆ.

ವಿವರಣೆ:— ವೀರಶೈವರಲ್ಲಿ ಮೇಲೆ ಹೇಳಿದಂತೆ ದೇವರ ಸಂಬಂಧ ವಾಗಿ ವಿಚಾರಗಳಿರುವದರಿಂದ ಅವರು ದೇವರು ಒಬ್ಬನೇ ಇದ್ದಾನೆ ಎಂಬ ಅಭಿಪ್ರಾಯಗಳಿರುವದು ಸ್ವಾಭಾವಿಕವಾಗಿದೆ.

ವಚನ:— ೭. ನಾಲ್ಕು ವೇದವನೋದಿದಂತವರ ಮನೆಯ ಬೋನವ ಶಿವಭಕ್ತರ ಮನೆಯಲ್ಲಿರುವ ನಾಯಿ ಮೂಸಿ ನೋಡಲಾಗದು. ಸಾಮವೇದಿ ಹೋಗುತ್ತಿರಲು ಶ್ವಪಚಯ್ಯಗಳು ತಮ್ಮ ಪಾದುಕದಿಂದೆ ಪಾಕವ ಮುಚ್ಚಿದರು. "ಶ್ವಾನೋ ಶ್ರೇಷ್ಠ" ವೆಂದು ಇಕ್ಕಿದೆನು ಮುಂಡಿಗಿಯ. ಎತ್ತಿರೋ ಜಗದ ಸಂತೆಯ ಸೂಳೆಯ ಮಕ್ಕಳು. ಜಗಕ್ಕೆ ಪಿತನೊಬ್ಬ ನಲ್ಲದೆ ಇಬ್ಬರೆಂದು ಬೊಗಳುವರ ಮೋರೆಯ ಮೇಲೆ ಹೊಡೆ ಎಂದಾತ ನಮ್ಮ ಅಂಬಿಗರ ಚೌಡಯ್ಯ ನಿಜಶರಣನು.

ಭಾವ:— ದೇವರು ಒಬ್ಬನೇ ಇದ್ದದರಿಂದ ಜಗಕ್ಕೆಲ್ಲ ಒಬ್ಬನೇ ಕರ್ತಾರನು. ಇಬ್ಬರಿದ್ದಾರೆಂದು ಭಾವಿಸಕೂಡದೆಂದು ಇಲ್ಲಿ ವಚನಕಾರನು ಹೇಳಿರುವನು. ವೇದಗಳು ಅನೇಕ ದೇವತೆಗಳನ್ನು ಪೂಜಿಸಬೇಕೆಂದು ನುಡಿಯುವದರಿಂದ ಅವುಗಳನ್ನು ಇಲ್ಲಿ ವಚನಕಾರನು ತಿರಸ್ಕರಿಸಿ ನುಡಿದಿ ರುವನು. ಆದ್ದರಿಂದ ಒಬ್ಬ ಪರಮಾತ್ಮನನ್ನು ನಂಬಿದವರೇ ಶ್ರೇಷ್ಠರೆಂದು ಅವನು ಕೆಲವು ಶಿವಶರಣರ ಚರಿತ್ರೆಗಳನ್ನು ಈ ಬಗ್ಗೆ ಉಲ್ಲೇಖಿಸಿರುವನು.

ವಚನ:— ೮. ಕಲ್ಲದೇವರ ಪೂಜೆ ಮಾಡಿ ಕಲಿಯುಗದಿ ಕತ್ತೆಗ ಳಾಗಿ ಹುಟ್ಟಿದರು. ಮಣ್ಣದೇವರ ಪೂಜಿಸಿ ಮಾನಹೀನರಾದರು. ಮರನು ದೇವರೆಂದು ಪೂಜಿಸಿ ಮಣ್ಣುಕೂಡಿದರು. ದೇವರ ಪೂಜಿಸಿ ಸ್ವರ್ಗಕ್ಕೇ ರದೆ ಹೋದರು. ಜಗದ್ಭರಿತವಾದ ಪರಶಿವನೊಳಗೆ ಕಿಂಕರನಾದ ಶಿವ ಭಕ್ತನೇ ಶ್ರೇಷ್ಠನೆಂದಾತ ನಮ್ಮ ಅಂಬಿಗರ ಚೌಡಯ್ಯ ನಿಜ ಶರಣನು.

ಭಾವ:— ಪರಮಾತ್ಮನು ಜಗದ್ಭರಿತನಾಗಿದ್ದಾನೆ. ಆದ್ದರಿಂದ ಇಂಥ ಪರಮಾತ್ಮನೊಬ್ಬನನ್ನೇ ನಂಬಬೇಕೇ ಹೊರ್ತು ಕಲ್ಲು, ಮಣ್ಣು, ಗಿಡ ಇವುಗಳಿಂದ ಮೂರ್ತಿಗಳನ್ನು ಮಾಡಿ ಅವುಗಳನ್ನು ಪೂಜಿಸುವದು ಯೋಗ್ಯ ವಲ್ಲ. ಹೀಗೆ ಪೂಜಿಸುವವರಿಗೆ ಮೋಕ್ಷವಿಲ್ಲೆಂದು ವಚನಕಾರನ ಭಾವವು.

ವಚನಃ— ೯. ಅರಳಿಯ ಮರ, ವಿಷ್ಣುಕಾಂತಿ, ಬನ್ನಿ, ಮುತ್ತುಗ, ತುಳಸಿ ಎಂದು ಹೊಡೆಹೊಮ್ಮುವಿರಿ. ಎಲ್ಲಿ ಭೋ. ಎಲ್ಲಿ ಭೋ, ನಿಮ್ಮ ಹೊಡೆವಡುವ ದೈವಗಳೆಲ್ಲಾ ಗಿಡುಮರನಾಗಿ ಹೋದವಲ್ಲಾ! ನಿಮ್ಮ ನಡೆ ಎಲ್ಲ ಅನಾಚಾರ. ನಿಮ್ಮ ನುಡಿ ಎಲ್ಲ ಶಿವದ್ರೋಹ ಇವಂದಿರ ಗಡಣ ಬೇಡೆಂದನಂಬಿಗ ಚೌಡಯ್ಯ.

ಭಾವಃ— ಅನೇಕರು ಅರಳಿಯ ಮರ, ವಿಷ್ಣುಕಾಂತಿ, ಬನ್ನಿ ಮುತ್ತುಗ, ತುಲಸಿ ಮುಂತಾದವುಗಳು ದೇವರೆಂದು ಭಾವಿಸಿ ನಮಸ್ಕಾರ ಮಾಡುವದುಂಟು. ಹೀಗೆ ಪೂಜಿಸುವಂಥವರಿಗೆ ದೇವತೆಗಳು ಗಿಡಮರಗಳೇ ಹೇಗೆ ಎಂದು ವಚನಕಾರನು ಹಾಸ್ಯದಿಂದ ನುಡಿದಿರುವನು. ಹೀಗೆ ಭಾವಿಸುವದು ಅನಾಚಾರ, ಪರಮಾತ್ಮನ ದ್ರೋಹವು. ಇಂಥವರ ಸ್ನೇಹ ಬೇಡವೆಂದು ವಚನಕಾರನು ನುಡಿದಿರುವನು.

ವಚನಃ— ೧೦. ಬ್ರಹ್ಮ, ವಿಷ್ಣು, ಕುಮಾರ ಲೆಕ್ಕವಿಲ್ಲದ ರುದ್ರರು ನೋಡಾ. ದೇವರ್ಕಳೆಲ್ಲ ಗರ್ವದಲೈದಿಹರು. ಅವರೆತ್ತ ಬಲ್ಲರು. ಶಿವನಾದಿಯಂತುವ? ಶಾಶ್ವತ ಪದಕ್ಕೆ ಸಲ್ಲದ ಕಾರಣ ಇವರು ವೇಷಧಾರಿಗಳೆಂದಾತ ಅಂಬಿಗರ ಚೌಡಯ್ಯ.

ಭಾವಃ— ವಿಷ್ಣು, ಬ್ರಹ್ಮ, ರುದ್ರಾದಿಗಳು ಕೇವಲ ವೇಷಧಾರಿಗಳೆಂದು ವಚನಕಾರನು ಅವರನ್ನು ಟೀಕಿಸಿದ್ದಾನೆ. ಅವರು ನಿಜವಾದ ದೇವರಲ್ಲ. ಒಂದು ವೇಳೆ ದೇವರಾಗಿದ್ದರೆ ಎಂದೆಂದಿಗೂ ಅಳಿಯದ ಪದದಲ್ಲಿ ಇರುತ್ತಿದ್ದರು. ಇಂಥ ಆ ಸ್ಥಿತಿಯು ಇವರಿಗಿಲ್ಲ. ಅವರು ಬರೇ ಅಹಂಕಾರಿಗಳಾಗಿ ತಾವು ದೇವರೆಂದು ಹೇಳಿಕೊಳ್ಳುತ್ತಾರೇ ಹೊರ್ತು ಪರಮಾತ್ಮನ ಆದಿ ಮತ್ತು ಅಂತ್ಯವನ್ನು ಅರಿಯರು.

ವಚನಃ— ೧೧. ಅರುಹಿರಿಯರ ದೈವದ ಪರಿ ನೋಡಾ. ಹೊಲೆಯರ ಬೊಮ್ಮಗ ತೊಗೆ ತುಪ್ಪವ ಬೇಡುವಂತೆ. ಬ್ರಹ್ಮಾವಿಷ್ಣುಗಳೆನು ಕಾಣರು. ವೇದಂಗಳು ನಾಚಡೆ ಉಲಿವ ಪರಿ ನೋಡಾ! ಗಂಗೆ ವಾಳುಕ ಸಮರುದ್ರರೆಲ್ಲರು ಲಿಂಗವ ಕಂಡರೈಸೆ? ಸ್ವಯಂಭುವ ಕಾಣರೆಂದನಂಬಿಗ ಚೌಡಯ್ಯ.

ಭಾವಃ— ಅಜ್ಞಾನಿಗಳಾಗಿರುವಂಥ ಜನರು ಭಾವಿಸುವ ದೇವರ ಪರಿಯನ್ನು ನೋಡಿದರೆ, ಅವು ಹೊಲೆಯರ ದೇವರಾದ ಬ್ರಹ್ಮನು ಜೇಳೆ ತುಪ್ಪನನ್ನು ತಿನ್ನಲಿಕ್ಕೆ ಬೇಡಿಗಂತೆಯೇ ಸರಿ. ಎಂದರೆ ಆ ದೇವರು ಇಂಥ ಜನರ ಪರಿಸ್ಥಿತಿಗೆ ಅನುಸರಿಸಿ ಇರುತ್ತವೇ ಹೊರ್ತು ಹೆಚ್ಚಿನದನ್ನು ಕಾಣಲಾರವು. ಬ್ರಹ್ಮವಿಷ್ಣುಗಳು ಸಹ ಪರಮಾತ್ಮನನ್ನು ಅರಿಯರು. ವೇದಂಗಳು ಸಹ ಪರಮಾತ್ಮನನ್ನು ಸ್ತೋತ್ರ ಮಾಡಿ ಮಾಡಿ ಅವನನ್ನು ಕಾಣದೆ ಹೋದವು. ಇಂಥ ಮಹತ್ತರ ದೇವತೆಗಳಿಗೆ ಇಂಥ ಸ್ಥಿತಿಯಾದ ಬಳಿಕ ಗಂಗಾನದಿಯ ಧಡದಲ್ಲಿರುವ ಉಸುಕಿನ ಕಣಗಳಷ್ಟು ಅಸಂಖ್ಯಾತರಾಗಿರುವ ರುದ್ರಗಣಂಗಳು ಲಿಂಗವನ್ನು ಕಾಣುವ ಬಗೆ ಹೇಗೆ? ಇವರಾರಿಗೂ ಸ್ವಯಂಭೂ ಮೂರ್ತಿಯಾದ ಪರಮಾತ್ಮನು ಕಾಣಿಸಿಕೊಳ್ಳಲಾರನೆಂದು ಅಂಬಿಗರ ಚೌಡಯ್ಯನು ನುಡಿದಿರುವನು.

ವಚನಃ— ೧೨. ತಡಿ ನೆಲೆ ಇಲ್ಲದ ಮಹಾ ನದಿಯಲ್ಲಿ ಒಡಲಿಲ್ಲದಂಬಿಗ ಬಂದಿದ್ದೇನೆ. ಹಿಡಿವ ಬಿಡುವ ಮನವ ಜೆಲೆಗೊಟ್ಟಡೆ, ಕಡೆಗಣಿಸಿ ಹಾಯಿಸುವೆ ಮಹಾ ಹೊಳೆಯ. ನುಡಿ ಇಲ್ಲದ ನಿಸ್ಸೀಮ ಗ್ರಾಮದಲ್ಲಿರಿಸುವೆನೆಂದಾತನಂಬಿಗ ಚೌಡಯ್ಯ.

ಭಾವಃ— ಈ ವಚನದಲ್ಲಿ ಅಂಬಿಗರ ಚೌಡಯ್ಯನು ತನ್ನ ಉದ್ಯೋಗವನ್ನು ಉಲ್ಲೇಖಿಸಿ ಅದರ ಉದಾಹರಣೆಯಿಂದ ಮನುಷ್ಯನು ಹ್ಯಾಗೆ ಮೋಕ್ಷಪದವನ್ನು ಹೊಂದಬೇಕೆಂಬದನ್ನು ಉಲ್ಲೇಖಿಸಿರುವನು. ಅವನು ಅನ್ನುವದೇನೆಂದರೆ, ಸಂಸಾರವೆಂಬುದೊಂದು ಮಹಾ ನದಿಯು ಇರುತ್ತದೆ. ಇದರ ಪ್ರವಾಹವನ್ನು ದಾಟುವದು ದುಸ್ತರವು. ಯಾಕೆಂದರೆ ಇದಕ್ಕೆ ದಂಡೆಯೂ ಇಲ್ಲ ಮತ್ತು ಆಳವೆಷ್ಟಿದೆ ಎಂಬುದೂ ತಿಳಿಯಲು ಶಕ್ಯವಿಲ್ಲ. ಇಂಥ ನದಿಯೊಳಗಿಂದ ನಾನು ನಿಮ್ಮನ್ನು ದಾಟಿಸುವೆನೆಂದು ಇಲ್ಲಿ ಹೇಳಿರುವನು. ಇಂಥ ಮಹಾನದಿಯನ್ನು ದಾಟಿಸಲು ನನಗೆ ಹ್ಯಾಗೆ ಶಕ್ಯವೆಂದರೆ ನನಗೆ ಒಡಲು ಎಂದರೆ ಸಂಸಾರವೆಂಬುದು ಇಲ್ಲ, ಆದ್ದರಿಂದ ನನಗೆ ಶಕ್ಯವೆಂಬ ಭಾವವನ್ನು ತೋರಿಸಿರುವನು. ಎಂದರೆ ಯಾವನು ಸಂಸಾರವನ್ನು ಬಿಟ್ಟಿರುವನೋ ಅವನೇ ಈ ಮಹಾನದಿಯನ್ನು ದಾಟಲಿಕ್ಕೆ ಸಮರ್ಥನೆಂದು ಭಾವವು. ಆದರೆ ತಾನು ಹೀಗಿದ್ದರೂ ಹೆರವರನ್ನು ದಾಟಸಬೇಕಾದರೆ ಅದಕ್ಕೊಂದು

ಶರ್ತನ್ನು ಹಾಕಿರುವನು. ಏನೆಂದರೆ ಅತ್ತ ಇತ್ತ ಪರಿದಾಡುವ ನಿಷ
ಚಂಚಲ ಮನಸ್ಸನ್ನು ನನಗೆ ಕೂಲಿಯಾಗಿ ಕೊಟ್ಟು ನಿಮ್ಮ 'ದೇಹವನ್ನ
ನನ್ನ ಕಡೆಗೆ ಒಪ್ಪಿಸಬೇಕು. ಎಂದರೆ ನಾನು ಈ ಮಹಾಹೊಳೆಯನ್ನ
ದಾಟಿಸುವೆನೆಂದು ಹೇಳಿರುವನು. ಅಂದರೆ ದೃಢಮನಸ್ಸಿನವರೇ ಕ
ಸಂಸಾರವನ್ನು ದಾಟುವರೆಂದು ಅವನ ಭಾವವು. ಈ ಪ್ರಕಾರ ವಿ
ಸಿದರೆ ಮೋಕ್ಷಪದವು ಲಭಿಸುವದು. ಈ ಮೋಕ್ಷಪದವು 'ನುಡಿ ಇಲ್ಲ
ನಿಸ್ಸೀಮ ಗ್ರಾಮ'ವೆಂದು ಅವನು ಇದರಲ್ಲಿ ವರ್ಣಿಸಿರುವನು. ಎಂದ
ಈ ಗ್ರಾಮಕ್ಕೆ ಸೀಮೆ ಎಂದರೆ ಮೇರೆಯು ಇಲ್ಲ. ಮತ್ತು ಅದ
ವರ್ಣನೆಗೆ ಅಶಕ್ಯವಾಗಿರುವದು ಎಂದು ಹೇಳಿರುವನು. ಈ ಪ್ರಕಾ
ಅಂಬಿಗರ ಚೌಡಯ್ಯನು ಸಂಸಾರವು ಹ್ಯಾಗೆ ಇರುತ್ತದೆ, ಅದನ್ನು ಹ್ಯಾ
ದಾಟಬೇಕು ಮತ್ತು ದಾಟಿ ಯಾವ ಸ್ಥಿತಿಗೆ ಹೋಗಬೇಕು ಎಂಬವನ್ನ
ಸ್ವಲ್ಪದರಲ್ಲಿ ವಿವರಿಸಿರುವನು.

---

## ಪರಮಾತ್ಮನನ್ನು ಕಾಣುವ ರೀತಿ.

ವಿವರಣೆ:— ವಚನಕಾರರು ಸ್ವರ್ಗ, ನರಕ, ಕೈಲಾಸ ಇಂಥವುಗಳು ಒಂದು ವಿಶಿಷ್ಟ ಸ್ಥಾನದಲ್ಲಿವೆ ಎಂದು ಭಾವಿಸುವದಿಲ್ಲ. ಇವೆಲ್ಲವೂ ಮನುಷ್ಯನ ದೇಹದಲ್ಲಿಯೇ ಇವೆ ಎಂದು ತಿಳಿಯುತ್ತಾರೆ. ಆದ್ದರಿಂದ ಮೋಕ್ಷವನ್ನು ಹೊಂದಲಿಕ್ಕೆ ಅನೇಕ ದೇಶಗಳಲ್ಲಿ ತೊಳಲಾಡುವ ಪ್ರಯೋಜನವಿಲ್ಲ. ಅದನ್ನು ತನ್ನಲ್ಲಿಯೇ ಸಂಪಾದಿಸಿಕೊಳ್ಳಬಹುದು. ಅಂಬಿಗರ ಚೌಡಯ್ಯನು ಹಿಂದಿನ ವಚನಗಳಲ್ಲಿ ಪರಮಾತ್ಮನು ಎಲ್ಲಿರುವನೆಂಬದನ್ನು ವಿವರಿಸಿರುವನಷ್ಟೇ. ಈ ವಚನಗಳಿಂದ ಪರಮಾತ್ಮನು ತನ್ನಲ್ಲಿಯೇ ಇದ್ದಾನೆಂದು ಗೊತ್ತಾಗುತ್ತದೆ. ಆದ್ದರಿಂದ ತನ್ನನ್ನು ತಾನು ತಿಳಿಯುವದೇ ಮೋಕ್ಷವೆಂದು ಅವನ ಅಭಿಪ್ರಾಯವು. ಇವೇ ವಿಚಾರಗಳನ್ನು ವಚನಕಾರರು ಮೇಲಿಂದ ಮೇಲೆ ಪ್ರತಿಪಾದಿಸುತ್ತಾರೆ. ಆದ್ದರಿಂದ ಮನುಷ್ಯನ ದೇಹವು ಸುಳ್ಳು, ಮಾಯೆಯುಳ್ಳದ್ದು, ತ್ಯಾಜ್ಯವು ಎಂಬ ವಿಚಾರಗಳು ವೀರಶೈವರಲ್ಲಿ ಇಲ್ಲ. ಅದು ಒಂದು ಶ್ರೇಷ್ಠ ವಸ್ತುವೆಂದು ಅವರು ತಿಳಿಯುತ್ತಾರೆ. ವಚನಕಾರರು ಅನ್ನುವದೇನೆಂದರೆ,

ತನ್ನನ್ನು ತಾನು ಅರಿತಾಗಳೇ ಮೋಕ್ಷಪ್ರಾಪ್ತಿಯು. ಯಾವಾಗ್ಗೆ ಈ ಅರಿವೇ ತಾನು ಎಂಬ ಭಾವವು ಉತ್ಪನ್ನವಾಗುತ್ತದೋ ಆಗ್ಗೆಯೇ ಮನುಷ್ಯನು ಪರಮಾವಧಿ ಸ್ಥಿತಿಯನ್ನು ಹೊಂದುತ್ತಾನೆ. ಈ ವಿಚಾರಗಳನ್ನು ಕೆಳಗಿನ ವಚನಗಳಲ್ಲಿ ಕಾಣಬಹುದು.

ವಚನ:— ೧೩. ಈಶ್ವರನನ್ನು ಕಾಂಬುವುದೊಂದಾಸೆಯುಳ್ಳೊಡೆ ಪರದೇಶಕ್ಕೆ ಹೋಗಿ ಬಳಲದಿರು. ಕಾಶಿಯಲ್ಲಿ ಕಾಯವ ವಿನಾಶವ ಮಾಡಲು ಬೇಡ. ನಿನ್ನಲ್ಲಿ ನೀ ತಿಳಿದು ನೋಡಾ. ಜಗವು ನಿನ್ನೊಳಗೆಂದಾತ ನಮ್ಮ ಅಂಬಿಗರ ಚೌಡಯ್ಯನು.

ಭಾವ:— ಇದರಲ್ಲಿ ವಚನಕಾರನು ಈಶ್ವರನನ್ನು ಹ್ಯಾಗೆ ಕಾಣಬೇಕೆಂಬುದನ್ನು ವಿವರಿಸಿರುವನು. ಅವನು ಅನ್ನುವದೇನಂದರೆ, ನೀನು ಈಶ್ವರನನ್ನು ಕಾಣಬೇಕಾದರೆ ಅನೇಕ ದೇಶಗಳಿಗೆ ಹೋಗಿ ಕಷ್ಟಪಡಬೇಡ. ಅನೇಕರು ವಾರಣಾಸಿಗೆ ಹೋಗಿ ಗಂಗಾ ನದಿಯಲ್ಲಿ ಮುಳುಗಿ ಸತ್ತು ಹೋದರೆ ಮೋಕ್ಷಪ್ರಾಪ್ತಿಯೆಂದು ಭಾವಿಸುತ್ತಾರೆ. ಹಾಗೆ ನೀನು ನಿನ್ನ

ಶರೀರವನ್ನು ನಾಶಮಾಡಬೇಡೆಂದು ಇಲ್ಲಿ ಹೇಳಿರುವನು. ಆದರೆ ನಿನ್ನ ಲ್ಲಿರುವ ನಿನ್ನನ್ನು ನೀನು ತಿಳಿದು ನೋಡಿದರೆ ಮೋಕ್ಷನೆಂದು ಅವನು ಕೆಲವು ಶಬ್ದಗಳಲ್ಲಿಯೇ ಹೇಳಿರುವನು. ಮತ್ತು ಇದಕ್ಕೆ ಒಂದು ಕಾರಣವನ್ನೂ ಕೊಟ್ಟಿರುವನು. ಏನೆಂದರೆ ಜಗವೆಲ್ಲವೂ ನಿನ್ನ ಶರೀ ದಲ್ಲಿಯೇ ಇದೆ, ಜಗತ್ತು ತನ್ನ ಬಿಟ್ಟು ಬೇರೆ ಇರುವದಿಲ್ಲ. ಆದ್ದ ರಿಂದ ಅಲ್ಲಿಯೇ ಪರಮಾತ್ಮನನ್ನು ಹುಡುಕಬೇಕೆಂದು ಹೇಳಿರುವನು. ಬೇರೆ ಬೇರೆ ದೇಶಗಳಿಗೆ ಹೋಗಿ ಕಷ್ಟಪಡುವ ಅವಶ್ಯವಿಲ್ಲವೆಂದು ಉಪದೇಶಿಸಿರುವನು.

ವಚನ— ೧೪. ತನ್ನ ಮರೆದು ದೇವರ ಕಂಡಿಹೆನೆಂದೆಂಬರು. ತನ್ನುವ ಮರೆದು ದೇವರ ಕಂಡಿಹೆನೆಂಬ ಕಾರಣ ಹರಿಸುರ ಬ್ರಹ್ಮಾದಿ ಗಳೆಲ್ಲರೂ ತಲೆ ಕೆಳಗಾಗಿ ಹೋದರು. ಆ ದೇವರ ಮರೆದು ತನ್ನವ ನರಿದರೆ ತಾನೇ ನಿಜಮೆಂದನಂಬಿಗ ಚೌಡಯ್ಯ.

ಭಾವ:— ಅನೇಕರು ಮೋಕ್ಷಸಂಪಾದನೆಗಾಗಿ ಹಿಂದೆ ಹೇಳಿದಂತೆ ದೇಶಗಳನ್ನೆಲ್ಲ ತಿರುಗುತ್ತಾರೆ. ಇನ್ನು ಕೆಲವರು ಈ ಸಂಸಾರವು ಸಟೆ, ತಮ್ಮ ದೇಹವು ಸುಳ್ಳು, ಎಂದು ಭಾವಿಸಿ ಇವುಗಳೆಲ್ಲವನ್ನು ಮರೆತರೆ ದೇವರು ಕಾಣುವನೆಂದು ಅನ್ನುತ್ತಾರೆ. ಈ ವಿಚಾರಗಳು ತಪ್ಪೆಂದು ವಚನಕಾರನು ಇಲ್ಲಿ ಅಂದಿರುತ್ತಾನೆ. ಈ ಪ್ರಕಾರ ಹರಿ, ಸುರ, ಬ್ರಹ್ಮಾದಿ ಗಳು ಹಿಂದೆ ಪ್ರಯತ್ನಿಸಿದರು. ಅವರು ಅಸಂಖ್ಯಾತ ವರುಷ ಜಪ ತಪಗಳನ್ನು ಮಾಡಿ ದೇಹವನ್ನು ಕ್ಲೇಶಪಡಿಸಿದರು. ಆದರೆ ಅವರು ಕಟ್ಟಕಡೆಗೆ ತಮ್ಮ ವಾಂಛಿತವನ್ನು ಪಡೆಯಲಾರದೆ ಮಾನಹೀನರಾಗಿ ಹೋಗಬೇ ಕಾಯಿತು. ಆದರೆ ಈ ತರದ ದೇವರನ್ನು ಬಿಟ್ಟುಕೊಟ್ಟು ತನ್ನನ್ನೇ ಅರಿದಡೆ ತಾನೇ ನಿಜವು, ಎಂದರೆ ನಿರಂತರವಾಗಿರುವ ಸತ್ಯ ವಸ್ತುವು ಎಂದು ವಚನಕಾರನು ಹೇಳಿರುವನು.

ವಚನ:— ೧೫. ತನ್ನ ಹುಸಿ ಮಾಡಿ ಇನ್ನೊಂದ ದಿಟ ಮಾಡುವ ಅಣ್ಣಂಗೆ ನಂಬುಗೆ ಇನ್ನಾವುದೋ? ತನ್ನೊಳಗಣ ಘನವ ತಾ ತಿಳಿಯ ಲರಿಯದೆ, ಪರಬ್ರಹ್ಮಕ್ಕೆ ತಲೆವಾರನಿಕ್ಕಿ ಸೆಳೆದಿಹೆನೆಂಬಣ್ಣ ಗಾವಿಲನೆಂ ದಾತನಂಬಿಗಚೌಡಯ್ಯ.

ಭಾವಃ— ಹಿಂದಿನ ವಚನಗಳಲ್ಲಿಯ ವಿಷಯವನ್ನೇ ವಚನಕಾರನು ಇಲ್ಲಿ ಬೇರೊಂದು ರೀತಿಯಿಂದ ಹೇಳಿರುವನು. ತನ್ನ ದೇಹವು ಹುಸಿ ಎಂದು ತಿಳಿದು ಮತ್ತೊಂದು ದಿಟವೆಂದು ಹೇಳುವ ಅಣ್ಣಗಳಿಗೆ ಯಾವು ದರಲ್ಲಿಯೂ ನಂಬುಗೆ ಹುಟ್ಟಲಾರದೆಂದು ವಿನೋದದಿಂದ ಅಂದಿರುವನು. ಯಾಕಂದರೆ ತಾನು ಎಂಬುದನ್ನು ಇವರು ಕಣ್ಮುಟ್ಟಿ ನೋಡುತ್ತಾರೆ, ಅದರೊ ಡನೆ ಅವರು ವ್ಯವಹರಿಸುತ್ತಾರೆ, ಅದರೊಡನೆ ಯಾವಾಗಲೂ ಕೂಡಿ ಇರು ತ್ತಾರೆ. ಇಂಥದನ್ನೇ ಅವರು ಸುಳ್ಳು ಎಂದು ಭಾವಿಸಿದ ಬಳಿಕ ಉಳಿ ದದ್ದು ನಿಜವೆಂದು ಭಾವಿಸುವ ಬಗೆ ಹೇಗೆ ಎಂದು ಇಲ್ಲಿ ಅಂದಿದ್ದಾನೆ. ಶ್ರೇಷ್ಠ ವಸ್ತುವು ತನ್ನಲ್ಲಿಯೇ ಇರುತ್ತದೆ. ಇದನ್ನು ತಿಳಿಯಲಾರದೆ ಬೇರೆ ಕಡೆಗೆ ಇದೆ ಎಂದು ಭಾವಿಸಿ ಅದನ್ನು ಹಠಾತ್ತಾಗಿ ಸೆಳೆ ದುಕೊಂಡು ಬರುವೆನೆಂದು ಅನ್ನುವವರು ಪೂರ್ಣ ಹುಂಬರು ಎಂದು ವಚನಕಾರನು ಅಂದಿರುವನು.

ವಚನಃ—೧೬. ಓದಿ ಬೋಧಿಸಿ ಇದಿರಿಂಗೆ ಹೇಳುವನ್ನಬರ ಚದು ರತೆಯಲ್ಲವೆ? ತಾ ತನ್ನನರಿದಲ್ಲಿ ಅರಿಕೆ ಇದಿರಿಗೆ ತೋರಿದಲ್ಲಿ ಅದೇ ದೇವತ್ವವೆಂದನಂಬಿಗಚೌಡಯ್ಯ.

ಭಾವಃ— ಇದರಲ್ಲಿ ವಚನಕಾರನು ತನ್ನನ್ನು ತಾನು ತಿಳಿಯುವ ದೆಂದರೇನು ಎಂಬುದನ್ನು ಹೇಳಿರುವನು. ತಿಳಿಯುವದೆಂದರೆ ಬಹಳ ಓದುವದೂ, ಅಭ್ಯಾಸ ಮಾಡುವದೂ ಎಂದು ತಿಳಿಯಬೇಕೋ ಹ್ಯಾಗೆ? ಇದು ತಪ್ಪು ಅಭಿಪ್ರಾಯವು. ವಚನಕಾರನ ಅಭಿಪ್ರಾಯದಂತೆ ಇದು ಚತುರತೆಯನ್ನು ಮಾತ್ರ ಸಂಪಾದಿಸಿದಂತಾಗುವದು. ಆದರೆ ಹೀಗೆ ಜಾಣ ತನವನ್ನು ಹೆಚ್ಚಿಸಿಕೊಂಡರೆ ಪರಮಾತ್ಮನ ಜ್ಞಾನವನ್ನು ಸಂಪಾದಿಸಿದಂತಾ ಗಲಿಲ್ಲ. ಆದರೆ ಮನುಷ್ಯನು ತನ್ನನ್ನು ತಾನು ಅರಿಯಬೇಕು. ಮತ್ತು ಹೀಗೆ ಅರಿತ ಅರಿಕೆಯು ತನಗೆ ಪ್ರತ್ಯಕ್ಷವಾಗಬೇಕು. ಹೀಗೆ ಆದಲ್ಲಿ ಅದೇ ದೇವತ್ವವೆಂದು ಇಲ್ಲಿ ಹೇಳಿರುವನು. ಅನೇಕರು ಪರಮಾತ್ಮನು ಇಂಥಿಂಥ ಅವಯವವುಳ್ಳವನು, ಇಂಥಿಂಥ ಸ್ವರೂಪುಳ್ಳವನು ಎಂದು ಭಾವಿಸಿ ಅವನನ್ನು ಪ್ರತ್ಯಕ್ಷ ಮಾಡಿಕೊಳ್ಳಲು ಬಯಸುವರು. ಇದು ತೀರ ಭ್ರಮೆಯು. ಇಂಥ ವಿಚಾರಗಳು ವೀರಶೈವರಲ್ಲಿ ಇಲ್ಲ. ಪರಮಾತ್ಮ ನು ಹೀಗೆ ಎಂದೂ ಕಾಣಿಸಿಕೊಳ್ಳಲಾರನು. ಯಾಕಂದರೆ ಕಾಣಿಸಿಕೊ

ಶರೀರವನ್ನು ನಾಶಮಾಡಬೇಡೆಂದು ಇಲ್ಲಿ ಹೇಳಿರುವನು. ಆದರೆ ನಿನ್ನ ಲ್ಲಿರುವ ನಿನ್ನನ್ನು ನೀನು ತಿಳಿದು ನೋಡಿದರೆ ಮೋಕ್ಷವೆಂದು ಅವನು ಕೆಲವು ಶಬ್ದಗಳಲ್ಲಿಯೇ ಹೇಳಿರುವನು. ಮತ್ತು ಇದಕ್ಕೆ ಒಂದು ಕಾರಣವನ್ನೂ ಕೊಟ್ಟಿರುವನು. ಏನೆಂದರೆ ಜಗವೆಲ್ಲವೂ ನಿನ್ನ ಶರೀ ದಲ್ಲಿಯೇ ಇದೆ, ಜಗತ್ತು ತನ್ನ ಬಿಟ್ಟು ಬೇರೆ ಇರುವದಿಲ್ಲ. ಅದ ರಿಂದ ಅಲ್ಲಿಯೇ ಪರಮಾತ್ಮನನ್ನು ಹುಡುಕಬೇಕೆಂದು ಹೇಳಿರುವನು. ಬೇರೆ ಬೇರೆ ದೇಶಗಳಿಗೆ ಹೋಗಿ ಕಸ್ಟಪಡುವ ಅವಶ್ಯವಿಲ್ಲವೆಂದು ಉಪದೇಶಿಸಿರುವನು.

ವಚನ— ೧೪. ತನ್ನ ಮರೆದು ದೇವರ ಕಂಡಿಹೆನೆಂದೆಂಬರು. ತನ್ನುವ ಮರೆದು ದೇವರ ಕಂಡಿಹೆನೆಂಬ ಕಾರಣ ಹರಿಸುರ ಬ್ರಹ್ಮಾದಿ ಗಳೆಲ್ಲರೂ ತಲೆ ಕೆಳಗಾಗಿ ಹೋದರು. ಆ ದೇವರ ಮರೆದು ತನ್ನವ ನರಿದರೆ ತಾನೇ ನಿಜವೆಂದನಂಬಿಗ ಚೌಡಯ್ಯ.

ಭಾವ:— ಅನೇಕರು ಮೋಕ್ಷಸಂಪಾದನೆಗಾಗಿ ಹಿಂದೆ ಹೇಳಿದಂತೆ ದೇಶಗಳನ್ನೆಲ್ಲ ತಿರುಗುತ್ತಾರೆ. ಇನ್ನು ಕೆಲವರು ಈ ಸಂಸಾರವು ಸಟಿ, ತಮ್ಮದೇಹವು ಸುಳ್ಳು ಎಂದು ಭಾವಿಸಿ ಇವುಗಳೆಲ್ಲವನ್ನು ಮರೆತರೆ ದೇವರು ಕಾಣುವನೆಂದು ಅನ್ನುತ್ತಾರೆ. ಈ ವಿಚಾರಗಳು ತಪ್ಪೆಂದು ವಚನಕಾರನು ಇಲ್ಲಿ ಅಂದಿರುತ್ತಾನೆ. ಈ ಪ್ರಕಾರ ಹರಿ, ಸುರ, ಬ್ರಹ್ಮಾದಿ ಗಳು ಹಿಂದೆ ಪ್ರಯತ್ನಿಸಿದರು. ಅವರು ಅಸಂಖ್ಯಾತ ವರುಷ ಜಪ ತಪಗಳನ್ನು ಮಾಡಿ ದೇಹವನ್ನು ಕ್ಲೇಶಪಡಿಸಿದರು. ಆದರೆ ಅವರು ಕಟ್ಟಕಡೆಗೆ ತಮ್ಮ ವಾಂಛಿತವನ್ನು ಪಡೆಯಲಾರದೆ ಮಾನಹೀನರಾಗಿ ಹೋಗಬೇ ಕಾಯಿತು. ಆದರೆ ಈ ತರದ ದೇವರನ್ನು ಬಿಟ್ಟುಕೊಟ್ಟು ತನ್ನನ್ನೇ ಅರಿದಡೆ ತಾನೇ ನಿಜವು, ಎಂದರೆ ನಿರಂತರವಾಗಿರುವ ಸತ್ಯ ವಸ್ತುವು ಎಂದು ವಚನಕಾರನು ಹೇಳಿರುವನು.

ವಚನ:— ೧೫. ತನ್ನ ಹುಸಿ ಮಾಡಿ ಇನ್ನೊಂದ ದಿಟ ಮಾಡುವ ಅಣ್ಣಂಗೆ ನಂಬುಗೆ ಇನ್ನಾವುದೋ? ತನ್ನೊಳಗಣ ಘನವ ತಾ ತಿಳಿಯ ಲರಿಯದೆ, ಪರಬ್ರಹ್ಮಕ್ಕೆ ತಲೆವಾರನಿಕ್ಕಿ ಸೆಳೆದಿಹೆನೆಂಬಣ್ಣ ಗಾವಿಲನೇ ದಾತನಂಬಿಗಚೌಡಯ್ಯ.

ಭಾವಃ— ಹಿಂದಿನ ವಚನಗಳಲ್ಲಿಯ ವಿಷಯವನ್ನೇ ವಚನಕಾರನು ಇಲ್ಲಿ ಬೇರೊಂದು ರೀತಿಯಿಂದ ಹೇಳಿರುವನು. ತನ್ನ ದೇಹವು ಹುಸಿ ಎಂದು ತಿಳಿದು ಮತ್ತೊಂದು ದಿಟವೆಂದು ಹೇಳುವ ಅಣ್ಣಗಳಿಗೆ ಯಾವುದರಲ್ಲಿಯೂ ನಂಬುಗೆ ಹುಟ್ಟಲಾರದೆಂದು ವಿನೋದದಿಂದ ಅಂದಿರುವನು. ಯಾಕಂದರೆ ತಾನು ಎಂಬುದನ್ನು ಇವರು ಕಣ್ಮುಟ್ಟಿ ನೋಡುತ್ತಾರೆ, ಅದರೊಡನೆ ಅವರು ವ್ಯವಹರಿಸುತ್ತಾರೆ, ಅದರೊಡನೆ ಯಾವಾಗಲೂ ಕೂಡಿ ಇರುತ್ತಾರೆ. ಇಂಥದನ್ನೇ ಅವರು ಸುಳ್ಳು ಎಂದು ಭಾವಿಸಿದ ಬಳಿಕ ಉಳಿದದ್ದು ನಿಜವೆಂದು ಭಾವಿಸುವ ಬಗೆ ಹೇಗೆ ಎಂದು ಇಲ್ಲಿ ಅಂದಿದ್ದಾನೆ. ಶ್ರೇಷ್ಠ ವಸ್ತುವು ತನ್ನಲ್ಲಿಯೇ ಇರುತ್ತದೆ. ಇದನ್ನು ತಿಳಿಯಲಾರದೆ ಬೇರೆ ಕಡೆಗೆ ಇದೆ ಎಂದು ಭಾವಿಸಿ ಅದನ್ನು ಹಠಾತ್ತಾಗಿ ಸೆಳೆದುಕೊಂಡು ಬರುವೆವೆಂದು ಅನ್ನುವವರು ಪೂರ್ಣ ಹುಂಬರು ಎಂದು ವಚನಕಾರನು ಅಂದಿರುವನು.

ವಚನಃ—೧೬. ಓದಿ ಬೋಧಿಸಿ ಇದಿರಿಂಗೆ ಹೇಳುವನ್ನಬರ ಚದುರತೆಯಲ್ಲವೆ? ತಾ ತನ್ನನರಿದಲ್ಲಿ ಅರಿಕೆ ಇದಿರಿಂಗೆ ತೋರಿದಲ್ಲಿ ಅದೇ ದೇವತ್ವವೆಂದನಂಬಿಗಚೌಡಯ್ಯ.

ಭಾವಃ— ಇದರಲ್ಲಿ ವಚನಕಾರನು ತನ್ನನ್ನು ತಾನು ತಿಳಿಯುವದೆಂದರೇನು ಎಂಬುದನ್ನು ಹೇಳಿರುವನು. ತಿಳಿಯುವದೆಂದರೆ ಬಹಳ ಓದುವದೂ, ಅಭ್ಯಾಸ ಮಾಡುವದೂ ಎಂದು ತಿಳಿಯಬೇಕೋ ಹ್ಯಾಗೆ? ಇದು ತಪ್ಪು ಅಭಿಪ್ರಾಯವು. ವಚನಕಾರನ ಅಭಿಪ್ರಾಯದಂತೆ ಇದು ಚತುರತೆಯನ್ನು ಮಾತ್ರ ಸಂಪಾದಿಸಿದಂತಾಗುವದು. ಆದರೆ ಹೀಗೆ ಜಾಣತನವನ್ನು ಹೆಚ್ಚಿಸಿಕೊಂಡರೆ ಪರಮಾತ್ಮನ ಜ್ಞಾನವನ್ನು ಸಂಪಾದಿಸಿದಂತಾಗಲಿಲ್ಲ. ಆದರೆ ಮನುಷ್ಯನು ತನ್ನನ್ನು ತಾನು ಅರಿಯಬೇಕು. ಮತ್ತು ಹೀಗೆ ಅರಿತ ಅರಿಕೆಯು ತನಗೆ ಪ್ರತ್ಯಕ್ಷವಾಗಬೇಕು. ಹೀಗೆ ಆದಲ್ಲಿ ಅದೇ ದೇವತ್ವವೆಂದು ಇಲ್ಲಿ ಹೇಳಿರುವನು. ಅನೇಕರು ಪರಮಾತ್ಮನು ಇಂಥಿಂಥ ಅವಯವವುಳ್ಳವನು, ಇಂಥಿಂಥ ಸ್ವರೂಪುಳ್ಳವನು ಎಂದು ಭಾವಿಸಿ ಅವನನ್ನು ಪ್ರತ್ಯಕ್ಷ ಮಾಡಿಕೊಳ್ಳಲು ಬಯಸುವರು. ಇದು ತೀರ ಭ್ರಮೆಯು. ಇಂಥ ವಿಚಾರಗಳು ವೀರಶೈವರಲ್ಲಿ ಇಲ್ಲ. ಪರಮಾತ್ಮನು ಹೀಗೆ ಎಂದೂ ಕಾಣಿಸಿಕೊಳ್ಳಲಾರನು. ಯಾಕಂದರೆ ಕಾಣಿಸಿಕೊ

ಳ್ಳುತಕ್ಕ ವಸ್ತುವು ತನ್ನಲ್ಲಿಯೇ ಇದೆ. ಅದನ್ನು ಪ್ರತ್ಯಕ್ಷಮಾಡಿಕೊಳ್ಳು ವದೇ ಪರಮಾತ್ಮನನ್ನು ಕಾಣುವದು ಎಂದು ವಚನಕಾರನ ಭಾವವಿದೆ.

**ವಚನಃ—** ೧೭. ಅಷ್ಟ ಮದಂಗಳ ಘಟ್ಟಿಯನೆ ಕರಗಿಸಿ, ಸತ್ವ ರಜತಮಂಗಳ ಬಿಟ್ಟು ಕಳೆದು, ಸುತ್ತುವ ಮನದ ಸುಳಿಯ ತಪ್ಪಿಸಿ, ಮುಂದೆ ಹುಟ್ಟದೆ ಹೋಗೆಂದನಂಬಿಗ ಚೌಡಯ್ಯ.

**ಭಾವಃ—** ತನ್ನನ್ನು ತಾನು ತಿಳಿಯುವದೆಂದರೇನು ಎಂಬದನ್ನು ವಚನಕಾರನು ಇಲ್ಲಿ ನಿರ್ದೇಶಿಸಿರುವನು. ತನಗೆ ಅರಿವು ಆಯಿತು ಎಂಬದನ್ನು ತಿಳಿಯಲಿಕ್ಕೆ ಒಂದು ಗುರುತು ಇರುವದು. ಇದು ಯಾವ ದೆಂದರೆ ಪುನರ್ಜನ್ಮವನ್ನು ಹೊಂದದೇ ಇರುವದೇ ಇರುತ್ತವೆ. ಎಲ್ಲಿಯ ವರೆಗೆ ಜ್ಞಾನವು ಇರುವದಿಲ್ಲವೋ, ಅಲ್ಲಿಯ ವರೆಗೆ ಪುನರ್ಜನ್ಮಗಳು ತಪ್ಪಲಾರವು. ಆದರೆ ಈ ಜ್ಞಾನವು ಉಂಟಾಗಬೇಕಾದರೆ ಅಷ್ಟಮ ದಗಳೆಂಬ ಕಠಿಣ ವಸ್ತುಗಳು ತನ್ನಲ್ಲಿ ಇವೆ. ಅವುಗಳನ್ನು ಮನು ಷ್ಯನು ಕರಗಿಸಿ ಹೋಗಲಾಡಿಸಿಕೊಳ್ಳಬೇಕು ಹಾಗೆಯೇ ಸತ್ವ, ರಜ, ತಮೋಗುಣಗಳೆಂಬವು ತನ್ನನ್ನು ಆವರಿಸಿಕೊಂಡಿರುತ್ತವೆ. ಅವುಗಳ ಸಂಕೋಲೆಯಿಂದ ಪಾರಾಗಬೇಕು. ಅದರಂತೆಯೇ ಚಂಚಲವಾದ ಮನಸ್ಸು ಮನುಷ್ಯನನ್ನು ಕಂಗೆಡಿಸುತ್ತಿರುತ್ತದೆ. ಇದು ಅವನನ್ನು ತಿರುಗುಣಿ ಮಡುವಿನೊಳಗಿದ್ದಂತೆ ಸುತ್ತಿ ಸುತ್ತಿ ತಿರುಗಿಸುತ್ತದೆ. ಈ ಮಡುವಿ ನೊಳಗಿಂದ ಅವನು ಪಾರಾಗಬೇಕು. ಹೀಗೆ ಮನುಷ್ಯನು ವರ್ತಿಸಿ ದ್ದಾದರೆ, ಅದೇ ಪರಮಾತ್ಮನ ಅರಿವು. ಈ ಅರಿವು ಪ್ರಾಪ್ತವಾದ ಬಳಿಕ ಪುನರ್ಜನ್ಮವು ಆಗಲಾರದೆಂದು ವಚನಕಾರನ ಭಾವವು. ಇದೇ ತನ್ನನ್ನು ತಾನು ತಿಳಿಯುವ ರೀತಿಯಾಗಿದೆ.

**ವಚನಃ—** ೧೮. ಅಂದಾದಿ ಬಿಂದುವಿನ ಹೊಂದಿದ ಹುಟ್ಟು, ಆ ಹುಟ್ಟನೆ ಹಿಡಿದು, ಅಂದ ಚಂದದಲ್ಲಿ ತೊಳಲಾಡುತ್ತಿದ್ದಿತು ಜಗವೆಲ್ಲ. ಅಂದಗೇಡಿಗಳೆಲ್ಲ ಬಂದೇರಿಹರು. ಇದನೊಂದೇ ಹುಟ್ಟಿನಲ್ಲಿ ಇಳುಹು ವೆನೆಂದನಂಬಿಗರ ಚೌಡಯ್ಯ.

**ಭಾವಃ—** ಈ ವಚನದಲ್ಲಿ ಅಂಬಿಗರ ಚೌಡಯ್ಯನು ತನ್ನ ಪುನ ರ್ಜನ್ಮವನ್ನು ಒಂದೇ ಜನ್ಮದಲ್ಲಿ ಕಳೆದುಬಿಡುವೆನೆಂದು ಇದರಲ್ಲಿ ಹೇಳಿ

ರುವನು. ಜಗತ್ತಿನ ಜನರೆಲ್ಲ ಅದರಲ್ಲಿಯ ಅಂದಚಂದಗಳಿಗೆ ಮೋಹಿಸಿ ಅನೇಕ ಕರ್ಮಗಳನ್ನು ಮಾಡುತ್ತ ಅನೇಕ ಜನ್ಮಗಳನ್ನು ತಾಳುತ್ತಿರುವರು. ಅಂದಗೇಡಿ ಜನಗಳು ಇದೇ ರೀತಿಯನ್ನು ಅವಲಂಬಿಸುವದುಂಟು. ಆದರೆ ನಾನು ಅವರಂತೆ ವರ್ತಿಸದೆ ಒಂದೇ ಜನ್ಮದಲ್ಲಿ ಮೋಕ್ಷವನ್ನು ಪಡೆಯುವೆನೆಂದು ವಚನಕಾರನು ಅಂದಿರುವನು.

ವಚನ:— ೧೯. ಕಲಿತು ಹೇಳಿಹೆನೆಂತು? ಕಾಣಬೇಕಾದರೆ ಅರಿತಿದ್ದೇ ಅರುಹು. ಹಿರಿಯತನಬೇಡ. ಅರಿದು ಮರೆದೆನೆಂಬ ಸಂದೇಹ ಬೇಡ. ದರ್ಪಣದಲ್ಲಿ ತೋರುವ ತನ್ನ ಒಪ್ಪದ ಪ್ರತಿಬಿಂಬದಂತೆ ಇದ ನಿಶ್ಚಯವಾಗಿ ನಿಶ್ಚೈಸಿದಲ್ಲಿ ಬೇರೊಂದಿಪ್ಪುದಿಲ್ಲ ಎಂದನಂಬಿಗ ಚೌಡಯ್ಯನು.

ಭಾವ:— ತನ್ನ ಜ್ಞಾನವು ತನಗೆ ಹೇಳಲಿಕ್ಕೆ ಬರಲಾರದು. ತಿಳಿಯಬೇಕಾದರೆ ತನಗೆ ತಿಳಿದದ್ದೇ ಜ್ಞಾನವು. ಎಂದರೆ ತನ್ನ ಅನುಭವಕ್ಕೆ ಬಾರದೆ ಹೆರರ ಹೇಳಿಕೆಯಿಂದ ಕಲಿತದ್ದು ಜ್ಞಾನವಲ್ಲವೆಂದು ವಚನಕಾರನ ಭಾವವು. ಹಾಗೆಯೇ ಇದರಲ್ಲಿ ನಾನು ಜ್ಞಾನವುಳ್ಳವನೆಂದು ಹಿರಿಯತನದಿಂದ ಸೊಕ್ಕಿನಿಂದ ನಡೆಯುವದು ಬೇಡ. ಜ್ಞಾನದ ರೀತಿ ಏನಂದರೆ, ಅದು ಪಕ್ವ ಸ್ಥಿತಿಗೆ ಬಂದಬಳಿಕ ಅದರ ಅರಿವು ಸಹ ಅವನಿಗೆ ಇರುವದಿಲ್ಲ. ಅದರಲ್ಲಿ ಅವನು ತನ್ಮಯನಾದ ಬಳಿಕ ಅದು ಹೀಗೆ ಹಾಗೆ ಇರುತ್ತದೆಂದು ಹೇಳಲಿಕ್ಕೆ ಬರಲಾರದು. ಈ ಸ್ಥಿತಿಯಾಗುವದು ತಿಳಿದು ಮರೆದಂತೆಯೇ ಸರಿ. ಕನ್ನಡಿಯಲ್ಲಿ ಹ್ಯಾಗೆ ತನ್ನ ಪ್ರತಿಬಿಂಬವು ಕಾಣುತ್ತದೋ ಹಾಗೆ ಜ್ಞಾನವು ಇರುವದು. ಜ್ಞಾನದ ಈ ಪರಿಸ್ಥಿತಿಯನ್ನು ತನ್ನಲ್ಲಿ ದೃಢಪಡಿಸಿದಲ್ಲಿ ಕಡೆಗೆ ಅದರ ಹೊರ್ತು ಏನೂ ಉಳಿಯುವದಿಲ್ಲ. ಹೀಗೆ ಅಂಬಿಗರ ಚೌಡಯ್ಯನು ಜ್ಞಾನದ ಹೊಳಿವಿಕೆಯ ನಿಜಸ್ಥಿತಿಯನ್ನು ಅರುಹಿದುತ್ತಾನೆ.

ವಚನ:— ೨೦. ಆದಿಶಕ್ತಿವಿಡಿದವರೆಲ್ಲರು ಜಂಗಮವಲ್ಲ. ಅನಾದಿಶಕ್ತಿವಿಡಿದವರೆಲ್ಲರು ಜ್ಞಾನಿಗಳಲ್ಲ. ಆದಿ ಅನಾದಿ ಎಂಬೆರಡ ಭೇದಿಸಿದಾಂಟಿ ಇಚ್ಛಾಶಕ್ತಿಯ ಇಚ್ಛೆಯ ಮರೆದು ಜ್ಞಾನಶಕ್ತಿಯ ತಾವನೊಲ್ಲದೆ ಕ್ರಿಯಾಶಕ್ತಿಯ ಭಾವವ ಬಿಟ್ಟು ತಾನು ತಾನಾದವಂಗೇನು ಇದಿರು ಇಲ್ಲ ಎಂದನಂಬಿಗ ಚೌಡಯ್ಯ.

ಭಾವಃ— ಇಲ್ಲಿ ಜ್ಞಾನದ ನಿಜಸ್ಥಿತಿಯನ್ನು ವಚನಕಾರನು ವರ್ಣಿಸಿದ್ದಾನೆ. ಇದರಲ್ಲಿ ಅವನು ಮನುಷ್ಯನ ಶಕ್ತಿಗಳಾವವು, ಪರಮಾತ್ಮನ ಜ್ಞಾನವು ಆದ ಹಾಗೆ ಆ ಶಕ್ತಿಗಳ ಸ್ಥಿತಿಯು ಹ್ಯಾಗೆ ಆಗುತ್ತ ಹೋಗುತ್ತದೆ, ಮತ್ತು ಮನುಷ್ಯನಲ್ಲಿ ವಿಕಾಸತೆಯು ಹ್ಯಾಗೆ ಹೆಚ್ಚುತ್ತ ಹೋಗುತ್ತದೆ ಎಂಬದನ್ನು ವಿವರಿಸಿದ್ದಾನೆ. ಮನುಷ್ಯನು ಜಗತ್ತಿನಲ್ಲಿ ವ್ಯವಹರಿಸುವದು ಶಕ್ತಿಯ ಮೂಲಕ. ಈ ಶಕ್ತಿಯಲ್ಲಿ ಆದಿ, ಅನಾದಿ ಎಂದು ಎರಡು ಮೂಲ ಭೇದಗಳಿವೆ. ಇವುಗಳ ತರುವಾಯ ಪುನಃ ಮೂರು ಶಕ್ತಿಗಳಿರುತ್ತವೆ. ಅವು ಯಾವವೆಂದರೆ ಇಚ್ಛಾ, ಜ್ಞಾನ, ಮತ್ತು ಕ್ರಿಯೆ. ಈ ಯಾವತ್ತು ಶಕ್ತಿಗಳ ವ್ಯವಹಾರಕ್ಕೆ ತಾನು ಅತೀತನಾಗಿ ವರ್ತಿಸಬೇಕೆಂದು ವಚನಕಾರನ ಮುಖ್ಯ ಭಾವವು. ಹೀಗೆ ವರ್ತಿಸುವದರಿಂದಲೇ ಅವನು ನಿಜತ್ವವನ್ನು ಹೊಂದುವನು.

ಅನಾದಿಶಕ್ತಿಯು ಅತ್ಯಂತ ವಿರಳವಾಗಿರುವದು. ಅದಕ್ಕೂ ಸ್ಥೂಲವಾದದ್ದು ಆದಿಶಕ್ತಿಯು. ಅನಾದಿ ಶಕ್ತಿಯನ್ನು ಹಿಡಿದು ಆಚರಿಸುವವರು ಜ್ಞಾನಿಗಳು. ಮತ್ತು ಆದಿ ಶಕ್ತಿಯನ್ನು ಹಿಡಿದು ಆಚರಿಸುವವರು ಜಂಗಮರು. ಆದರೆ ಇವರು ತಮ್ಮ ತಮ್ಮ ಶಕ್ತಿಗಳಲ್ಲಿ ಮಾತ್ರ ಆಸಕ್ತರಾದರೆ, ಅವರ ವಿಕಾಸಭಾವಕ್ಕೆ ಅನುಕೂಲವಾಗಲಾರದು. ಆದರೆ ಈ ಶಕ್ತಿಗಳಲ್ಲಿ ಇದ್ದೂ ಇಲ್ಲದವರಂತೆ ಅವರು ವ್ಯವಹರಿಸಬೇಕು. ಇವುಗಳ ತರುವಾಯ ಇಚ್ಛಾ, ಜ್ಞಾನ, ಕ್ರಿಯೆ ಎಂಬವುಗಳು ಕ್ರಮವಾಗಿ ಬರುತ್ತವೆ. ಇವು ಹೆಚ್ಚು ಹೆಚ್ಚು ಸ್ಥೂಲತರವಾಗಿರುವವು. ಇವುಗಳ ಮೂಲಕ ಮನುಷ್ಯನ ಸ್ಥೂಲವ್ಯಾಪಾರಗಳು ನಡೆಯುತ್ತವೆ. ಇಚ್ಛಾ ಶಕ್ತಿಯಲ್ಲಿ ಮನುಷ್ಯನು ಆಸಕ್ತನಾಗಿ ಅದಕ್ಕೆ ಅನುಸರಿಸಿ ಅದು ಹರಿದತ್ತ ಹೋಗಕೂಡದು. ಅದನ್ನು ತನ್ನ ಅಂಕಿತದಲ್ಲಿ ಇಟ್ಟುಕೊಳ್ಳಬೇಕು. ಜ್ಞಾನಶಕ್ತಿಯ ಸ್ಥಿತಿಯನ್ನೂ ಕೂಡ ತನ್ನಧೀನದಲ್ಲಿ ಇಟ್ಟುಕೊಳ್ಳಬೇಕು. ಹಾಗೆಯೇ ಕ್ರಿಯಾಶಕ್ತಿಯ ಕಾರ್ಯಗಳ ಎಳೆತಕ್ಕೂ ಒಳೆಯದಿರಬೇಕು. ಮನುಷ್ಯನು ತನ್ನನ್ನು ಹೀಗೆ ಹೊಯ್ದಾಡಿಸುವ ಶಕ್ತಿಗಳಿಗೆ ಮೀರಿ ನಡೆದದ್ದಾದರೆ ಮಾತ್ರ ಅವನು "ತಾನು ತಾನಾಗುವನು." ಎಂದರೆ ಅವನು ಸ್ವತಂತ್ರನಾಗುವನು. ಇಂಥವನಿಗೆ ಇದಿರು ಎಂಬುದು ಇಲ್ಲ. ಅವನು ಪರಮಾತ್ಮನ ಸ್ವರೂಪೇ ಆಗುವನೆಂದು ವಚನಕಾರನ ಭಾವವಿದೆ.

ವಚನ:— ೨೧. ಕಾಳಗಕ್ಕೆ ಹೋಗದಿರಯ್ಯ ಕಲ್ಲು ಗುಂಡು ತಾಕಿ ಹವು. ಆರು ದರ್ಶನಗಳಿಗೆ ನಿಮ್ಮನ್ನು ತೋರದಿರಯ್ಯ. ನಾಲ್ಕು ವೇದ ಹದಿನೆಂಟು ಪುರಾಣವೆಂಬುವರ ಬೆನ್ನ ಹತ್ತದಿರು. ಬೇರೆ ತೀರ್ಥ ಯಾತ್ರೆ ಎಂಬುವ ಆಸ್ಥಾತನ ಬೇಡ. ಪುಣ್ಯ ಪಾಪವೆಂಬವೆರಡು ಭಾಂಡಾರವನು ಬೆನ್ನಿನಲ್ಲಿಕ್ಕಿಕೊಂಡು ಬಾರದಿರು ನೀನು. ನಿನ್ನಲ್ಲೇ ನೀನು ತಿಳಿದು ನೋಡು ಜಗದೊಳಗೆಂದಾತ ನಮ್ಮ ಅಂಬಿಗರ ಚೌಡಯ್ಯನು.

ಭಾವ:— ಶಕ್ತಿಗಳನ್ನು ಅಧೀನದಲ್ಲಿ ಇಟ್ಟುಕೊಂಡು ವರ್ತಿಸಿದರೆ, ಅವನಲ್ಲಿ ಪುಣ್ಯ ಪಾಪಗಳು ಉಂಟಾಗಲಾರವು ಎಂಬದನ್ನು ವಚನಕಾರನು ಇದರಲ್ಲಿ ವಿವರಿಸಿ ನುಡಿದಿರುವನು. ಇದು ಉಂಟಾದಲ್ಲಿ ಅವನಿಗೆ "ನಿನ್ನಲ್ಲಿ ನೀನು ತಿಳಿದು ನೋಡು" ಎಂಬುವದನ್ನು ತಿಳಿಯುವ ಸ್ಥಿತಿಯು ಪ್ರಾಪ್ತವಾಗುವದು.

ಇಲ್ಲಿ ಅವನು ಕಾಳಗಕ್ಕೆ ಹೋಗದಿರು ಎಂದು ಹೇಳಿದ್ದಾನೆ. ಯಾಕಂದರೆ ಅಲ್ಲಿ ಗಾಸಿಯಾಗುವದೇ ನಿಜವು. ಅದೇ ಪ್ರಕಾರ ಪ್ರಪಂಚದ ಜಂಜಡದಲ್ಲಿ ಸೇರಿದರೆ ಮನುಷ್ಯನು ಗಾಸಿಯಾಗದೆ ಇರನು. ಅದೇ ಪ್ರಕಾರ ಆರು ದರ್ಶನಗಳಿದ್ದು ಅವುಗಳಿಗೆ ಮನ ಸೋಲಬಾರದು. ಹಾಗೆಯೇ ನಾಲ್ಕು ವೇದ ಹದಿನೆಂಟು ಪುರಾಣಗಳನ್ನು ಓದಿದವರೆಂದು ಇಂಥವರ ಬೆನ್ನು ಹತ್ತಬಾರದು. ಹಾಗೆಯೇ ತೀರ್ಥ ಯಾತ್ರೆಗಳೂ ಇವೆ. ಅವುಗಳಿಗೆ ನಾನು ಹೋಗಿ ಬರುವೆನೆಂದು ಸೊಕ್ಕಿನ ವರ್ತನೆಯೂ ಬೇಡ. ಯಾಕಂದರೆ ಇವೆಲ್ಲವೂ ಪುಣ್ಯ ಪಾಪಗಳನ್ನು ಮಾತ್ರ ಹೆಚ್ಚಿಸುತ್ತವೆ. ಇವು ಹೆಚ್ಚಿದಲ್ಲಿ ಭವದಲ್ಲಿ ಸಿಲ್ಕುವದೇ ನಿಶ್ಚಯವು. ನಿನ್ನನ್ನು ನೀನು ತಿಳಿಯಲಾರಿ ಎಂದು ಅಂಬಿಗರ ಚೌಡಯ್ಯನು ಎಚ್ಚರು ಕೊಟ್ಟಿರುವನು.

ವಚನ:— ೨೨. ಅಂಬಿಗನು ಜಗದೊಳಗೆ ಆಡುವನು, ತುಂಬಿದ ಸಾಗರದೊಳಗೆ ನೋಡಯ್ಯ! ನಿಂದ ಡೋಣಿಯನೇರಿದಂದು ಹುಟ್ಟ ಕಡಿವಂದವ ನರಿದಾತ ತೊಳಸುತ್ತಿದ್ದನು. ಚಂದಗೆಟ್ಟವರೆಲ್ಲ ಬಂದೇರಿ ಡೋಣಿಯನು ಶಿವನೊಂದೆ ತಾವಿಗೊಯಿದಿಳುಹುವೆನೆಂದ ನಂಬಿಗಚೌಡಯ್ಯ.

ಭಾವ:— ಈ ವಚನದಲ್ಲಿ ಅಂಬಿಗರ ಚೌಡಯ್ಯನು ತನ್ನ ಸ್ವಭಾವವನ್ನು ಮತ್ತು ತನ್ನ ವೃತ್ತಿಯನ್ನು ಕುರಿತು ಅತ್ಯಂತ ಅಭಿಮಾನಪೂರ್ವಕವಾಗಿ ನುಡಿದಿರುವನು. ಈ ವಚನದಿಂದ ಚೌಡಯ್ಯನು ಎಂಥ ವಿಶಾಲವೃತ್ತಿಯಿಂದ ಆಚರಿಸುತ್ತಿದ್ದನೆಂಬದನ್ನು ಊಹಿಸಬಹುದಾಗಿದೆ.

ಆವನು ಇದರಲ್ಲಿ ಅನ್ನುವದೇನೆಂದರೆ:— ನಾನು ಒಬ್ಬ ಸಾಮಾನ್ಯ ಅಂಬಿಗನಲ್ಲ. ನಾನು ಜಲದಿಂದ ತುಂಬಿ ತುಳುಕುವ ಮಹಾಸಾಗರದಲ್ಲಿ ಓಲಾಡುತ್ತಲಿದ್ದೇನೆ ಎಂದು ಹೇಳುತ್ತಾನೆ. ನನಗೆ ಈ ಡೋಣಿಯು ಪ್ರಾಪ್ತವಾದಂದಿನಿಂದ ಹುಟ್ಟನ್ನು ಕಡಿಯುವ ರೀತಿಯನ್ನು ಅರಿತು ಕೊಂಡು ಅದನ್ನು ಅತ್ತಿತ್ತ ಹರಿದಾಡಿಸುತ್ತಲಿದ್ದೇನೆ. ಯಾರು ಈ ಪ್ರಪಂಚಸಾಗರವನ್ನು ದಾಟಲಾರದೆ ಇರುವರೋ ಅವರು ನನ್ನ ಈ ಡೋಣಿಯಲ್ಲಿ ಬಂದು ಕುಳ್ಳಿರೆಂದು ವಚನಕಾರನು ಹೇಳುತ್ತಾನೆ. ಮತ್ತು ಹೀಗೆ ಬಂದು ಕುಳಿತುಕೊಂಡಲ್ಲಿ ಶಿವನಿರುವಂಥ ತಾವಿಗೆ ನಿಮ್ಮನ್ನು ಒಯ್ದು ಇಳುಹುತ್ತೇನೆಂತಲೂ ಇದರಲ್ಲಿ ಅಂದಿದ್ದಾನೆ. ವಚನಕಾರನು ತನ್ನ ಅಂಬಿಗರ ವೃತ್ತಿಯಿಂದ ಜೀವಿಸುತ್ತಿದ್ದನ್ನೂ, ಹೀಗೆ ಜೀವಿಸುತ್ತಿದ್ದರೂ ಕೂಡ, ಅವನು ಜನತೆಯ ಉದ್ಧಾರಕಾಗಿ ಹ್ಯಾಗೆ ವರ್ತಿಸುತ್ತಿದ್ದನೆಂಬದನ್ನೂ ಈ ವಚನದಿಂದ ಕಂಡುಹಿಡಿಯಬಹುದಾಗಿದೆ.

---

## ಜ್ಞಾನದ ಸ್ವರೂಪ

ವಿವರಣೆ:— ಪರಮಾತ್ಮನ ಜ್ಞಾನವೆಂದರೆ ಅವನ ಸಂಬಂಧ ವಾಗಿ ನಾನಾ ವಿಧವಾಗಿ ಚರ್ಚಿಸಿ ಊಹೆ, ತರ್ಕಗಳನ್ನು ಮಾಡಿ ವಾದಿ ಸುವದು ಅಲ್ಲ. ಯಾವುದರಿಂದ ಆತನನ್ನು ಕಾಣುವದು ಶಕ್ಯವೋ ಯಾವುದರಿಂದ ತನ್ನ ನಿಜಸ್ಥಿತಿಯ ಹೊಳಪು ಉತ್ಪನ್ನವಾಗುತ್ತದೋ ಯಾವುದರಿಂದ ತನ್ನ ವಿಕಾಸವು ಹೆಚ್ಚುತ್ತ ಹೋಗುತ್ತದೋ ಅದೇ ಶುದ್ಧಜ್ಞಾನವೆನಿಸಿಕೊಳ್ಳುವದು. ಅದು ಅತ್ಯಂತ ಶ್ರೇಷ್ಠಸ್ವರೂಪುಳ್ಳದ್ದಾಗಿರು ವದು. ಅದರ ಮೂಲಕ ಜಗತ್ತಿನಲ್ಲಿ ತಲೆದೋರುವ ಪರಸ್ಪರ ಭಿನ್ನತೆ ಗಳು ಅಡಗಿ ಹೋಗುತ್ತವೆ. ಎಲ್ಲವೂ ಒಂದೇಯಾಗಿ, ಜಗತ್ತಿನ ಬಗ್ಗೆ ಪ್ರೀತಿ ಸಮತಾಭಾವ ದಯಾಭಾವ ಇವುಗಳೆಲ್ಲವೂ ಪ್ರಾದುರ್ಭವಿಸು ತ್ತವೆ. ಅದು ಶುದ್ಧ ಸ್ವರೂಪುಳ್ಳದಾಗಿರುವದರಿಂದ ಅದೇ ರೀತಿಯಾಗಿಯೇ ಎಲ್ಲರು ವ್ಯವಹರಿಸುವಂತೆ ಮಾಡುತ್ತದೆ. ಇವುಗಳೇ ಪರಮಾತ್ಮನ ಜ್ಞಾನದ ಲಕ್ಷಣವೆಂದು ವಚನಕಾರನು ಹೇಳುತ್ತಾನೆ.

ವಚನ:—೨೩. ಅರಿವನರಿದಲ್ಲಿ ತಾನೆನ್ನದೆ ಇದಿರೆನ್ನದೆ, ಮತ್ತೇನುವ ಸಂಪಾದಿಸದೆ, ಅರುಣನ ಕಿರಣದಲ್ಲಿ ಅರತ ಸಾರದಂತೆ, ಕಾದ ಹಂಚಿನ ಮೇಲೆ ಬಿಟ್ಟ ನೀರಿನಂತೆ, ಬಧಿರನ ಕಾವ್ಯದಂತೆ ಚದುರನ ಒಳ್ಪಿನಂತೆ ತಲೆದೋರದೆ ನಿಂದಾತನಡಿಗೆರಗುವೆನೆಂದನಂಬಿಗರ ಚೌಡಯ್ಯ.

ಅರ್ಥ:— ಈ ವಚನದಲ್ಲಿ ವಚನಕಾರನು ಜ್ಞಾನದ ಸ್ವರೂ ಪನ್ನು ಸಂಕ್ಷಿಪ್ತವಾಗಿ ಹೇಳಿರುವನು. ಯಾವನು ಜ್ಞಾನಿಯಾಗಿರು ತ್ತಾನೋ ಅವನಲ್ಲಿ ತಾನು ಮತ್ತು ಹೆರವರು ಎಂಬ ಭೇದಭಾವವು ಹೊರಟುಹೋಗುತ್ತದೆ. ಅವನಿಗೆ ಎಲ್ಲವೂ ಸಮನಾಗಿ ತೋರುತ್ತವೆ. ಮತ್ತು ಹೆಚ್ಚುಕಡಿಮೆ ಭಾವಗಳು ಉಳಿಯಲಾರವು. ಇಂಥವನಲ್ಲಿ ಪೂರ್ಣ ಸ್ಥಿತಿಯು ಉಂಟಾಗಿರುವದರಿಂದ, ಅವನು ಮತ್ತೇನನ್ನೂ ಬಯಸುವ ದಿಲ್ಲ. ಈ ಇತರ ವಸ್ತುಗಳು ಅವನ ಮನಸ್ಸಿನ ಮೇಲೆ ಪರಿಣಾಮ ಮಾಡಲಾ ರವು. ಈ ಸ್ಥಿತಿಯಲ್ಲಿ ಅವನು "ಅರುಣನ ಕಿರಣದಲ್ಲಿ ಅರತ ಸಾರ"ದಂತೆ ಇರುತ್ತಾನೆಂದು ಒಂದು ದೃಷ್ಟಾಂತವನ್ನು ಹೇಳಿರುವನು. ಅರುಣನ ಕಿರಣಗಳು ಶೀತಲವಾಗಿರುತ್ತವೆ. ಆದರೆ ಆ ಕಿರಣದಲ್ಲಿ ಉಷ್ಣತೆಯ ಸಾರವು ಅಡಗಿಕೊಂಡು ಇರುತ್ತದೆ. ಅದೇ ಪ್ರಕಾರ ಜ್ಞಾನಿಯ ವ್ಯವಹಾರ

ದಲ್ಲಿ ಅವನು ಇತರ ಮನುಷ್ಯರಂತೆ ಕಂಡರೂ ಪರಮಾತ್ಮನ ಕಳೆಯು ಅವನಲ್ಲಿ ತೋರದೆ ಅಂತರ್ಭೂತವಾಗಿ ವಾಸಿಸುತ್ತದೆ. ಅದೇ ಮೇರೆಗೆ ಅವನು ಕಾದ ಹಂಚಿನ ಮೇಲೆ ಬಿಟ್ಟ ನೀರಿನಂತೆ ಇರುತ್ತಾನೆ. ನೀರು ಜಡವಸ್ತುವಾದರೂ ಕಾದ ಹಂಚಿನ ಮೇಲೆ ಬಿದ್ದ ಕೂಡಲೇ ಅದರ ಜಡತ್ವವು ಹೊರಟುಹೋಗುತ್ತದೆ. ಅದೇ ಪ್ರಕಾರ ಪ್ರಪಂಚದಲ್ಲಿ ಸಂಸಾರದ ಯಾತನೆಗಳು ಒದಗಿದರೂ ಕೂಡ ಅವು ಅವನಿಗೆ ತಾಕಲಾರವು. ಆ ಯಾತನೆಗಳೆಲ್ಲವೂ ಅವನಿಗೆ ಸ ಖಮಯವಾಗಿ ಪರಿಣಮಿಸುವವು. ಅದೇ ಮೇರೆಗೆ ಅವನು ಕಿವುಡನ ಕಾವ್ಯದಂತೆ ಮತ್ತು ಚತುರನ ಒಳ್ಳೇ ಗುಣದಂತೆ ಇರುತ್ತಾನೆ. ಅವರಿಗೆ ಯಾವ ಪ್ರಕಾರ ತಮ್ಮೊಳಗೆ ಇರುವ ಈ ಗುಣಗಳು ಕಾಣಬರುವದಿಲ್ಲವೋ ಹಾಗೆಯೇ ಜ್ಞಾನಿಗಳಿಗೆ ತಾವು ಜ್ಞಾನಿಗಳಿದ್ದೇವೆಂಬ ತಿಳುವಳಿಕೆಯು ಇರುವದಿಲ್ಲ. ಅವರು ಆದರಲ್ಲಿ ಏಕಾಕಾರವಾಗಿ ಸಂಸಾರದಲ್ಲಿ ಇದ್ದೂ ಇಲ್ಲದಂತೆ ವ್ಯವಹರಿಸುತ್ತಾರೆಂದು ವಚನಕಾರನ ಭಾವವು.

ವಚನ:— ೨೪. ಕ್ರಿಯೆಯನರಿಸವಂಗೆ ಗುರುವಿಲ್ಲ, ಆಚಾರವನರಿದವಂಗೆ ಲಿಂಗವಿಲ್ಲ, ಉತ್ಪತ್ತಿ ಸ್ಥಿತಿ ಲಯವನರಿದವಂಗೆ ಜಂಗಮವಿಲ್ಲ, ಪರಬ್ರಹ್ಮವನರಿದವಂಗೆ ಸರ್ವೇಂದ್ರಿಯವಿಲ್ಲ ತನ್ನನರಿದವಂಗೆ ಹಿಂದುಮುಂದು ಕಾಂಬುವುದೊಂದು ಇಲ್ಲೆಂದನಂಬಿಗ ಚೌಡಯ್ಯ.

ಭಾವಃ— ಇಲ್ಲಿ ಜ್ಞಾನವೆಂದರೆ ತನ್ನನ್ನು ತಾನು ತಿಳಿಯುವದು ಎಂಬ ಅರ್ಥವನ್ನು ಒತ್ತಿ ಹೇಳಿರುವನು. ಗುರುಲಿಂಗಜಂಗಮವು ಜ್ಞಾನಕ್ಕೆ ಸಾಧನವೆಂದು ತಿಳಿದು ಅವುಗಳನ್ನು ತಿಳಿಯಲು ಅಪೇಕ್ಷಿಸುವದು ತಪ್ಪೆಂದು ಪರ್ಯಾಯದಿಂದ ಇಲ್ಲಿ ಹೇಳಿರುವನು. ಅವುಗಳೇ ಮಹತ್ವವಾದವುಗಳೆಂದು ಬಗೆದು ಅವುಗಳ ಆಚರಣೆಗಳಲ್ಲಿಯಷ್ಟೇ ತೊಡಗಬಾರದು. ಆದರೆ ಅವುಗಳು ತನ್ನನ್ನು ತಿಳಿಯಲಿಕ್ಕೆ ಸಾಧನಗಳೆಂದು ಮಾತ್ರ ತಿಳಿದು ಅವನು ವ್ಯವಹರಿಸತಕ್ಕದ್ದು. ಇಲ್ಲಿ ವಚನಕಾರನು ಕ್ರಿಯಾ ಆಚಾರ ಮತ್ತು ಜ್ಞಾನ ಎಂದು ಮೂರು ಭೇದಗಳನ್ನು ಮಾಡಿ, ಕ್ರಿಯೆ ಎಂದರೆ ನಡತೆ, ಇದನ್ನು ತಿಳಿಸಿ ಕೊಡುವಂಥವನು ಗುರುವು ಎಂತಲೂ ಅನೇಕ ಬಗೆಯ ಧಾರ್ಮಿಕ ಆಚಾರಗಳಿದ್ದು ಅವುಗಳ ಜ್ಞಾನ ಮಾಡಿಕೊಡುವಂತಹದು ಲಿಂಗವೆಂತಲೂ, ಜಗತ್ತಿನ ಉತ್ಪತ್ತಿ ಸ್ಥಿತಿ ಲಯಗಳ ಜ್ಞಾನ ಮಾಡಿ ಕೊಡುವಂಥವನು ಜಂಗಮನೆಂತಲೂ ಹೇಳಿ ಇವುಗಳ ಪೂರ್ತಿ ಅಷ್ಟಷ್ಟನ್ನೇ ಆಚರಿಸಿ ವ್ಯವಹರಿಸುವವನಿಗೆ

ಇವಾವೂ ದೊರೆಯಲಾರವು. ಇಷ್ಟೇ ಅಲ್ಲ ಪರಮಾತ್ಮನು ಇದ್ದಾನೆಂಬದನ್ನು ತಿಳಿದು ಆತನನ್ನು ಅರಿತರೂ ಕೂಡ ಉಪಯೋಗವಿಲ್ಲವೆಂದು ಅವನು ಹೇಳಿರುವನು. ಯಾಕಂದರೆ ಪರಮಾತ್ಮನನ್ನು ಅರಿತಲ್ಲಿ ಅನೇಕ ಇಂದ್ರಿಯಗಳ ಮೂಲಕ ವ್ಯವಹರಿಸುವ ಮನುಷ್ಯನು ಅವುಗಳೊಡನೆ ವ್ಯವಹರಿಸುವದು ಮಾತ್ರ ನಿಲ್ಲಬಹುದು. ಎಂದರೆ ಪರಮಾತ್ಮನೂ ತಾನೂ ಒಂದೇಯಾಗಿ ವ್ಯವಹರಿಸಲು ಅವನು ಬಲ್ಲವನಾಗಬಹುದು. ಆದರೆ ಮನುಷ್ಯನು ಇದಕ್ಕೂ ಮುಂದೆ ಹೋಗತಕ್ಕದ್ದು. ಅಂದರೆ ತನ್ನನ್ನು ತಾನು ಅರಿತು ತನ್ನೊಳಗಾಗಿ, ಹಿಂದೆ ಮುಂದೆ ಯಾವುದೂ ಇರದೆ ವರ್ತಿಸಬೇಕು ಎಂದು ಹೇಳಿರುವನು. ಇದೇ ನಿಜವಾದ ಜ್ಞಾನವೆಂದು ಅವನು ಹೇಳಿರುವನು.

ವಚನ:— ೨೫. ತಟಾಕ ಒಡೆದಡೆ ಕಟ್ಟುವಡೆವುದಲ್ಲದೆ, ಅಂಬುಧಿ ತುಂಬಿ ಮೇರೆದಪ್ಪಿದಲ್ಲಿ ಕಟ್ಟಂಗೆ ಹಿಂಗಿ ನಿಂದುದುಂಟೆ? ಅರಿಯದವಂಗೆ ಅರಿಕೆಯು ಹೇಳಿದಡೆ ಅರಿವನಲ್ಲದೆ ಅರಿದು ಮರೆದವಂಗೆ ಬೇರೊಂದೆಡೆಯ ಹೇಳಿಹೆನೆಂದಡೆ ಕಡೆನಡುಮೊದಲಿಲ್ಲವೆಂದನಂಬಿಗ ಚೌಡಯ್ಯ.

ಭಾವ:— ಜ್ಞಾನಿಯಾದವನ ಸ್ವರೂಪವನ್ನು ಈ ವಚನದಲ್ಲಿ ವಚನಕಾರನು ವಿವರಿಸಿರುವನು. ಆತನಿಗೆ ಕಟ್ಟು, ಅಥವಾ ಮೇರೆ ಎಂಬುದು ಯಾವದೂ ಇರುವದಿಲ್ಲ. ಅವನು ಮರ್ಯಾದರಹಿತನಾಗಿರುವನು. ತಟಾಕ ಎಂದರೆ ಕೆರೆ, ಇದಕ್ಕೆ ಮೇರೆ ಇದೆ. ಆದರೆ ಮಹಾಸಾಗರಕ್ಕೆ ಮೇರೆಯು ಇಲ್ಲ ಅದೇ ಪ್ರಕಾರ ಜ್ಞಾನಿಗೆ ಆದಿ, ಮಧ್ಯ, ಅಂತ್ಯವೆಂಬುವಾವೂ ಇರುವದಿಲ್ಲ. ಈ ಸ್ಥಿತಿಯನ್ನು ಮನುಷ್ಯನು ಅರಿದು ಮರೆದಿರುವನೆಂದು ವಚನಕಾರನು ವರ್ಣಿಸಿರುವನು. ಎಂದರೆ ಮರೆಯುವದೆಂದರೆ ಗೊತ್ತಿಲ್ಲವೆಂಬುದರ್ಥವಲ್ಲ. ಆದರೆ ಹ್ಯಾಗೆ ಪ್ರಕಾಶಿಸುವ ಕ್ರಿಯೆಗಳು ಗೂಢ ರೂಪದಲ್ಲಿ ಇರುತ್ತವೋ ಆ ಸ್ಥಿತಿಯೇ ಸರಿ. ಜಗತ್ತಿನ ಜ್ಞಾನವು ಹಿಂದೆ ಹೇಗೆ ಮರೆತದ್ದನ್ನು ನೆನಪಿಗೆ ತರುವದೆಂದು ವಚನಕಾರನ ಭಾವವು. ಮನುಷ್ಯನು ಈ ಪ್ರಕಾರ ಒಳಗೆ ಹುದುಗಿದ್ದನ್ನು ಪ್ರಕಟಪಡಿಸಿ, ಹೀಗೆ ಪ್ರಕಟವಾದ ಬಳಿಕ ಅದನ್ನು ಪುನಃ ಮರೆಯಬೇಕು. ಈ ಕಡೆಯ ಸ್ಥಿತಿಯೇ ಮನುಷ್ಯನ ಪೂರ್ಣತ್ವವೆಂದು ವಚನಕಾರನು ಇಲ್ಲಿ ಹೇಳಿರುವನು. ಅರಿದು ಮರೆದವನಿಗೆ ಏನೆಂದೂ ಹೇಳಲು ಶಕ್ಯವಲ್ಲ. ಯಾಕಂದರೆ ಈ ಸ್ಥಿತಿಯನ್ನು ಅವನು ಮೀರಿರುತ್ತಾನೆ. ಒಳಗಿದ್ದುದನ್ನು ಪ್ರಕಟ ಮಾಡುವವನಿಗೆ ಮಾತ್ರ

ವಿವರಿಸುವದು ಶಕ್ಯವು. ಆದರೆ ಜ್ಞಾನಿಸಿಗೆ ಹೀಗೆ ವಿವರಿಸಲು ಶಕ್ಯ
ವೆಂದು ವಚನಕಾರನ ಭಾವವು.

ವಚನಃ— ೨೬. ಪೃಥ್ವಿ ಶುದ್ಧವೆಂಬೆನೆ? ಶುದ್ಧವಲ್ಲ. ಜಲ ಶುದ್ಧ
ಬೆನೆ? ಜಲ ಶುದ್ಧವಲ್ಲ; ಅಗ್ನಿ ಶುದ್ಧವೆಂಬೆನೆ? ಅಗ್ನಿ ಶುದ್ಧವಲ್ಲ; ವಾ
ಶುದ್ಧವೆಂಬೆನೆ? ವಾಯು ಶುದ್ದವಲ್ಲ; ಬೆಳಗು ಶುದ್ಧವೆಂಬೆನೆ? ಬೆ
ಶುದ್ಧವಲ್ಲ. ನೀ ಕೇಳಯ್ಯ ಹುಸಿಮುಸಕವ ಕಳೆದು ಜ್ಞಾನವೆಂಬ ಬೆ
ಸಾಧಿಸಬಲ್ಲಡೆ ಅಲ್ಲಿ ತಾನಿಪ್ಪನೆಂದ ನಂಬಿಗಚೌಡಯ್ಯ.

ಭಾವಃ— ವಚನಕಾರನು ಇಲ್ಲಿ ಜ್ಞಾನದ ಸ್ವರೂಪವನ್ನು ವಿ
ರುವನು. ಅದು ಅತ್ಯಂತ ಶುದ್ಧ ವಸ್ತುವೆಂದು ಅವನು ಹೇಳಿರುವನು.
ಕರು ಪಂಚಭೂತಗಳು ಎಂದರೆ ಪೃಥ್ವಿ, ಜಲ, ಅಗ್ನಿ, ವಾಯು
ಅತ್ಯಂತ ಶುದ್ಧ ವಸ್ತುಗಳೆಂದು ಭಾವಿಸುತ್ತಾರೆ. ಆದರೆ ವಚನಕಾ
ಇವಾವೂ ಶುದ್ಧವಲ್ಲವೆಂದು ನುಡಿದಿರುವನು. ಇಷ್ಟೇ ಅಲ್ಲ, ಪ್ರಕಾ
ಸಹ ಶುದ್ಧ ವಸ್ತುವಲ್ಲವೆಂದು ಅಂದಿರುವನು. ಆದರಲ್ಲಿಯೂ
ಇದೆ. ಆದರೆ ಇವೆಲ್ಲವುಗಳಿಗಿಂತ ಶುದ್ಧವಾದ ವಸ್ತುವು ಜ್ಞಾನವೆ
ದಿದೆ. ಹುಸಿಯನ್ನು ಕಳೆದು ಅದನ್ನು ಸಾಧಿಸಿದರೆ ಅಲ್ಲಿ ಪರಮಾ
ರುವನು ಎಂದು ವಚನಕಾರನು ಅಂದಿರುವನು.

ವಚನಃ— ೨೭. ಪುಣ್ಯಪಾಪ ವಿರಹಿತನು ಕಂಡ ಕ್ರಿ ಏಕೆ? ಒಬ್ಬ
ಕಂಡ ಆರು ದರ್ಶನವೇಕೆ? ಮಾಟವೆಂಬುದೆಲ್ಲವೂ ಕೋಟಲೆ ಎಂ
ಕಳೆದು ದೂಟಿಸಿ ನುಡಿದಾತನಂಬಿಗ ಚೌಡಯ್ಯ.

ಭಾವಃ—ಜ್ಞಾನಿಗೆ ಪುಣ್ಯವೂ ಇಲ್ಲ. ಪಾಪವೂ ಇಲ್ಲ. ಇವ
ಳಿಂದ ಅವನು ಹೊರತಾಗಿರುವನು. ಅವನ ಕ್ರಿಯೆಗಳೇ ಈ ಬಗೆ
ವಾಗಿವೆ. ಆದೇ ಪ್ರಕಾರ ಆವನಿಗೆ ಆರು ದರ್ಶನಗಳ ಸಂಪೂರ್ಣ ಜ್ಞಾ
ವಾದರೂ ಕೂಡ ಅದು ಅವನಿಗೆ ಪರಿಣಾಮಕರವಾಗಲಾರದು.
ತ್ತಿನಲ್ಲಿ ಕಂಡು ಬರುವ ಕ್ರಿಯೆಗಳೆಲ್ಲವೂ ಅವನನ್ನು ತೊಂದರೆಗೆ
ಮಾತ್ರ ಈಡು ಮಾಡುವಂಥವುಗಳಿರುತ್ತವೆ. ಆದ್ದರಿಂದ ಅವುಗಳ
ಕಳೆದು ಹೊಗೆ ಹಾಕಿ ಬಿಡಿರೆಂದು ವಚನಕಾರನು ಅಂದಿರುವನು.

ವಚನಃ— ೨೮. ಜ್ಞಾನಿಯಾದಲ್ಲಿ ಧ್ಯಾನ ಮೌನಂಗಳಲ್ಲಿರಲೇತಕ್ಕೆ
ಅರಿವು ಕರಿಗೊಂಡಲ್ಲಿ ಸುರುಳಿ ಸುರುಳಿ ಬಿಡಲೇತಕ್ಕೆ? ತಲೆಯೊಡೆಯ

ಕಣ್ಣು ಹೊರತು ಎಂಬ ತುಡುಗುಣಿತನವೇ? ಆ ಗುಣ ಬಿಡು ಎಂದ ನಂಬಿಗಚೌಡಯ್ಯ.

ಭಾವಃ— ಜ್ಞಾನಿಗಳಾದವರು ಯಾವಾಗಲೂ ಧ್ಯಾನ ಮೌನಗಳಲ್ಲಿ ಮಗ್ನರಾಗಿರಬೇಕೆಂದು ಭಾವಿಸುತ್ತಾರೆ. ಆದರೆ ಇದು ತಪ್ಪೆಂದು ವಚನಕಾರನ ಭಾವವು. ಅರಿವು ಪುನಃ ಗುಪ್ತ ಸ್ವರೂಪವನ್ನು ಹೊಂದಿದ ಬಳಿಕ, ಅದನ್ನು ಮುಚ್ಚುವುದೂ ಪುನಃ ಬಿಡುವುದೂ ಏತಕ್ಕೆ ಎಂದು ವಚನಕಾರನು ಅಂದಿರುವನು. ಇವನಲ್ಲಿ ಒಮ್ಮೆ ಹಿಡಿಯುವುದೂ ಒಮ್ಮೆ ಬಿಡುವುದೂ ಇರಲಾರದು. ಯಾಕಂದರೆ ಅವನು ಹೀಗೆ ಸಂಶಯಗ್ರಸ್ತನಾಗಿ ಎಂದೂ ವ್ಯವಹರಿಸುವದಿಲ್ಲ. ಕೊಲೆಗಡಿಕನು ತಲೆ ಹಾರಿಸಲು ಸನ್ನದ್ಧನಾಗಿರುವಾಗ್ಗೆ ಕಣ್ಣೊಂದನ್ನು ಉಳಿಸಬೇಕೆಂದು ಅವನ ಮನಸ್ಸಿನಲ್ಲಿ ಎಂದಾದರೂ ಬರಬಹುದೇ? ಎಂದೂ ಬರಲಾರದು. ಅದೇ ಪ್ರಕಾರ ಮನುಷ್ಯನು ಜಗತ್ತಿನಲ್ಲಿ ವರ್ತಿಸುವಾಗ್ಗೆ ಅವನು ಅದು, ಇದು ಎಂಬ ಸಂದೇಹ ವೃತ್ತಿಯನ್ನು ಬಿಟ್ಟುಕೊಟ್ಟು ಉಚ್ಚ ಧ್ಯೇಯವುಳ್ಳವನಾಗಿ ಅದರಲ್ಲಿ ಮಗ್ನನಾಗಿರುವನೇ ಹೊರ್ತು ಉಳಿದ ಕಾಲ್ಪನಿಕ ವಿಚಾರಗಳಲ್ಲಿ ಮನಸ್ಸು ಹಾಕನು.

ವಚನಃ— ೨೯. ಕೇಳಿದೇನೆಲೆ ಮಾನುವ, ಪಂಚಮಹಾಪಾತಕ ದೋಷಾದಿಗಗಳನ್ನು ಮಾಡಿ ಬಾಯಿಲೆ ಶಿವ ಶಿವ ಎಂದು ಶಿವನ ನೆನೆದರೆ ಭವ ಹರಿಯಿತೆಂಬ ವಿಚಾರಗೇಡಿಗಳ ಮಾತು ಕೇಳಲಾಗದು. ಜ್ಯೋತಿಯ ನೆನೆದರೆ ಕತ್ತಲೆ ಹಿಂಗುವುದೆ? ರಂಭೆಯ ನೆನೆದರೆ ಕಾಮದ ಕಳವಳ ಹೋಗುವುದೆ? ಮೃಷ್ಟಾನ್ನವ ನೆನೆದರೆ ಹೊಟ್ಟೆ ತುಂಬುವುದೆ? ಮಾಡಿದಂತಹ ದೋಷವು ಹೋಗಲಾರದು. ಇಂತಪ್ಪ ದುರಾಚಾರಿಗಳ ಪಡಿಹಾರಿ ಉತ್ತಣ್ಣಗಳ ಪಾದುಕೆಯಿಂದ ಹೊಡಿ ಎಂದಾತ ನಮ್ಮ ಅಂಬಿಗರ ಚೌಡಯ್ಯ ನಿಜ ಶರಣನು.

ಭಾವಃ— ಈ ವಚನದಲ್ಲಿ ವಚನಕಾರನು ಜ್ಞಾನವೆಂದರೆ ಏನೇನೂ ಕೆಲಸ ಮಾಡದೆ ಧ್ಯಾನಸ್ಥನಾಗಿ ಉಳಿಯುವದ್ದು ಅಲ್ಲವೆಂದು ನುಡಿದಿರುವನು. ಬರೇ ಶಿವ ಶಿವ ಎಂದು ಪರಮಾತ್ಮನನ್ನು ನೆನೆಯುತ್ತ ಪಂಚ ಮಹಾಪಾತಕಗಳನ್ನು ಮಾಡಿದರೆ ಜ್ಞಾನವು ಲಭಿಸಲಾರದು. ಕತ್ತಲೆಯಲ್ಲಿದ್ದುಕೊಂಡು ಅಲ್ಲಿ ಬೆಳಕನ್ನು ಬಯಸುತ್ತ ಕುಳಿತರೆ ಕತ್ತಲೆಯು ಹರಿಯದು. ಬೆಳಕು ಇದ್ದಲ್ಲಿಗೆ ಹೋಗಿ ಅದನ್ನು ಕಾಣುವದು. ಅದೇ ಮೇರೆಗೆ

ವಚನಕಾರನು ಬೇರೆ ಉದಾಹರಣೆಗಳನ್ನು ಇಲ್ಲಿ ಕೊಟ್ಟಿರುವನು. ರಿಂದ ಬರೇ ಧ್ಯಾನಿಸುವದರಿಂದ ಮಾಡಿದ ಪಾಪಗಳು ಹೋಗಲಾರವೆ ವಚನಕಾರನು ಇಲ್ಲಿ ಅಂದಿದ್ದಾನೆ.

**ವಚನ:**— ೩೦. ವ್ರತವೆಂಬುದೇ ಪ್ರಾಣ, ಘಟವೆಂಬುದೇ ಕ ಪ್ರಾಣವಿಲ್ಲದೆ ಘಟಜ್ಞಾನವಿಲ್ಲದೆ, ಈ ಉಭಯಕ್ಕೂ ನಾ ನೀ ಎ ದನರಿಯಬೇಕೆಂದಾತ ನಮ್ಮ ಅಂಬಿಗರ ಚೌಡಯ್ಯ.

**ಭಾವ:**—ಜ್ಞಾನಿಯಾದವನು ನಿಶ್ಚಯಿಸಿ ಮಾಡಬೇಕೆಂದು ವಚನಕಾರನು ಅಂದಿರುವನು. ಪ್ರತಿಯೊಂದು ಕಾರ್ಯಕ್ಕೆ ವ್ರತ ಎ ಒಂದು ಧ್ಯೇಯವನ್ನು ಗೊತ್ತುಪಡಿಸಿ ಅದನ್ನು ಬಿಟ್ಟು ಬಿಡದೆ ಮಾ ವದು ಅವಶ್ಯವಿದೆ. ಈ ಧ್ಯೇಯದಂತೆ ವ್ಯವಹರಿಸುವಾಗ್ಗೆ ತನ್ನ ರವ ಗುಣಗಳ ನಿಜತ್ವವನ್ನು ತಿಳಿದು ವರ್ತಿಸತಕ್ಕದ್ದು. ಶ ಗುಣಗಳಿಂದ ಮನುಷ್ಯನು ಬದ್ಧನಾದ್ದರಿಂದ ಅವನಿಗೆ ಇವುಗಳ ಜ್ಞಾ ವಿರಬೇಕು. ಹೀಗೆ ಪ್ರಾಣ ಮತ್ತು ಘಟ ಇವುಗಳ ಜ್ಞಾನವ ಹೊಂದಿ ಅವುಗಳಿಗೆ ಮೀರಿ ನಿಲ್ಲಬೇಕು. ಎಂದರೆ ಅವುಗಳ ಸಿ ಸಿಗದೆ ನಾ ನೀ ಎಂಬದನ್ನು ತಿಳಿಯಬೇಕೆಂದು ವಚನಕಾರನು ರುವನು.

**ವಚನ:**— ೩೧. ಅರಿವುದೊಂದು ವಾಯು, ಮರೆವುದೊ ವಾಯು, ಉಭಯದಿಂದ ತೋರುವ ವಾಯು ಒಂದೆಯಾಗಿ, ನೆಗ್ಗಳಿಸಿ ನಿಂತು ತೆಗೆದಡೆ ಅಲ್ಲಿಯೇ ಅಡಗುವಂತೆ ಅರಿದು ನುಡಿಯ ನಡೆ ಜ್ಞಾನಿ, ನುಡಿದ ನುಡಿಗೆ ನಡೆಯದಡಗೆ ಆತನೆ ಜೀವ ಭಾವಿ ಎಂ ಬಿಗ ಚೌಡಯ್ಯ.

**ಭಾವ:**— ಶರೀರದಲ್ಲಿ ಅನೇಕ ವಾಯುಗಳಿದ್ದು ಅವುಗಳ ಮ ಮನುಷ್ಯನ ಅಂತರಿಂದ್ರಿಯಗಳಲ್ಲಿ ಪರಸ್ಪರ ಸಂಬಂಧವು ಒದಗಿ ವುದೂ ಮರೆವುದೂ ಮೊದಲಾದ ಸ್ಥಿತಿಗಳುಂಟಾಗುತ್ತವೆ. ಈ ವಾಯುಗಳು ಒಂದೇಯಾಗಬೇಕೆಂಬು ವಚನಕಾರನ ಭಾವವು. ಜ್ಞಾನಿಯ ಚಿನ್ಹವು. ವಾಯುವು ಹೆಚ್ಚಿದಲ್ಲಿ ಅಥವಾ ತಗ್ಗಿದಲ್ಲಿ ಅಲ್ಲಿ ಅದು ನಿರ್ಬಂಧಿಸಲ್ಪಡಬೇಕು. ಈ ಪ್ರಕಾರ ಸ್ಥಿರತರ ಮನಸ್ಸು ಉಂ ದಲ್ಲಿ ನಡೆಯೂ ನುಡಿಯೂ ಒಂದೇ ಆಗುವವು. ಒಂದೇ ಆ

ಜ್ಞಾನಿಯು. ಹಾಗೆ ಆಗದಿದ್ದಲ್ಲಿ ಜೀವಭಾವಿಯು ಎಂದು ವಚನ ಕಾರನು ಹೇಳಿರುವನು.

ವಚನ:— ೩೨ ಅಜಾತನನೊಲಿಸಹೊಡೆ ಅದೇತರ ಮಂತ್ರ, ಅದೇತರಾಗಮ ಹೇಳಿರೊ? ಅವಾವ ಮುಖದಲ್ಲಿ ಲಿಂಗ ಬಂದಿಪ್ಪುದೋ? ರೂಪಿಲ್ಲದಾತ ನಿಮ್ಮ ಮಾತಿಂಗೆ ಬಪ್ಪನೇ? ಅದೇತರ ಮಾತೆಂದನಂಬಿಗಚೌಡಯ್ಯ.

ಭಾವ:— ಪರಮಾತ್ಮನನ್ನು ಒಲಿಸಬೇಕಾದರೆ ಬರೇ ಮಾತಿನಿಂದ ಒಲಿಸಲಿಕ್ಕೆ ಶಕ್ಯವಲ್ಲ. ಹಾಗೆಯೇ ಬರೇ ಆಗಮಗಳನ್ನು ಉಚ್ಚ ಸ್ವರದಿಂದ ಓದುವದರಿಂದ ಅಥವಾ ಮಂತ್ರೋಚ್ಚರಣೆಯಿಂದ ಒಲಿಯಲಾರನು. ಲಿಂಗ ಕಳೆಯು ಹೀಗೆ ತನ್ನಲ್ಲಿ ಉಂಟಾಗಲಾರದು. ರೂಪಿಲ್ಲದಂಥ ಪರಮಾತ್ಮನು ಬರೇ ಮಾತಿನ ಮಾಲೆಗೆ ಸಿಕ್ಕಲಾರನು. ಮಂತ್ರಗಳೂ ಆಗಮಗಳೂ ಪರಮಾತ್ಮನು ಇಂತಿಂಥಹ ರೂಪುಳ್ಳವನು ಎಂದು ಅವನನ್ನು ಸ್ತುತಿಸುತ್ತವೆಂಬದು ನಿಜವು. ಆದರೆ ಇಂಥ ಸ್ತುತಿಗಳಿಗೆ ಪರಮಾತ್ಮನು ಒಲಿಯಲಾರನು.

ವಚನ:- ೩೩ ನಾದದಬಲದಿಂದ ವೇದಂಗಳಾದವಲ್ಲದೆ ವೇದಸ್ವಯಂಭುವಲ್ಲನಿಲ್ಲು. ಮಾತಿನ ಬಲದಿಂದ ಶಾಸ್ತ್ರಂಗಳಾದವಲ್ಲದೆ ಶಾಸ್ತ್ರಸ್ವಯಂಭುವಲ್ಲ ನಿಲ್ಲು. ಪಾಷಾಣದ ಬಲದಿಂದ ಸಮಯಂಗಳಾದವಲ್ಲದೆ ಸಮಯ ಸ್ವಯಂಭುವಲ್ಲ ನಿಲ್ಲು. ಇಂತೀ ಮಾತಿನ ಬಣಬೆಯ ಮುಂತಿಟ್ಟುಕೊಂಡು ಆತನ ಕಂಡಿಹೆನೆಂದಡೆ ಅತನತ್ಯತಿಷ್ಠದ್ದಶಾಂಗುಲ. ಆತನೆಂತು ಸಿಲುಕುವನೆಂದಾತನಂಬಿಗಚೌಡಯ್ಯ?

ಭಾವ:— ಓಂಕಾರ ಮಂತ್ರೋಚ್ಚರಣೆಯಿಂದ ಅಥವಾ ವೇದ ಪಠನದಿಂದ ಅಥವಾ ಶಾಸ್ತ್ರಾರ್ಥ ಮಾಡುವದರಿಂದ ಅಥವಾ ಕಲ್ಲಿನ ಮೂರ್ತಿಗಳನ್ನು ಪೂಜಿಸುವದರಿಂದ ಪರಮಾತ್ಮನ ಜ್ಞಾನವು ಉಂಟಾಗಲಾರದು. ಬರೇ ಸಪ್ಪಳ, ಮಾತು, ಕಲ್ಲು ಇವುಗಳಿಂದ ಪರಮಾತ್ಮನು ಸಿಕ್ಕಬಹುದೋ? ಇಂಥ ಮಾತಿನ ಬಣವೆಯನ್ನು ಮುಂದಿಟ್ಟುಕೊಂಡು ಪರಮಾತ್ಮನನ್ನು ಕಾಣುವೆನೆಂಬದು ಅಶಕ್ಯವಾದ ಸಂಗತಿಯು. ಯಾಕಂದರೆ ಪರಮಾತ್ಮನು ಜಗತ್ತನ್ನು ದಾಟಿ "ಅತ್ಯತಿಷ್ಠದ್ದಶಾಂಗುಲ" ನಾಗಿದ್ದಾನೆ. ಇಂಥವನು ನಮಗೆ ಮೇಲ್ಕಂಡ ರೀತಿಯಿಂದ ಹ್ಯಾಗೆ ಸಿಕ್ಕಬಹುದು ಎಂದು ವಚನಕಾರನು ಅಂದಿರುವನು.

---

## ಜ್ಞಾನ ಸಂಪಾದನೆಯ ರೀತಿ.

**ವಿವರಣೆ:—** ಅಂಬಿಗರ ಚೌಡಯ್ಯನು ಪರಮಾತ್ಮನ ಸ್ವರೂಪ ವುದು, ಅವನ ಜ್ಞಾನವೆಂದರೇನು ಎಂಬದನ್ನು ವಿವರಿಸಿ, ಆ ಜ್ಞಾನವ ಹ್ಯಾಗೆ ಸಂಪಾದಿಸಬೇಕು ಮತ್ತು ತನ್ನ ಪ್ರಗತಿಯನ್ನು ಹ್ಯಾಗೆ ಮಾಡಿಕೊ ಬೇಕು ಎಂಬದನ್ನು ಮುಂದಿನ ವಚನಗಳಲ್ಲಿ ವಿವರಿಸಿರುವನು.

ಮನುಷ್ಯನು ಈ ಜಗತ್ತಿನಲ್ಲಿಯೇ ವ್ಯವಹರಿಸಿ ಇಲ್ಲಿಯ ಕಾರ್ಯ ಳಿಂದಲೇ ತನ್ನ ಗುಣಗಳನ್ನು ವಿಕಾಸಗೊಳಿಸತಕ್ಕದ್ದು. ಅವನು ತನ್ನಲ್ಲಿ ಕ್ಷುದ್ರ ಗುಣಗಳನ್ನು ಬಿಟ್ಟುಕೊಡುವದರಿಂದಲೇ ಅವನಲ್ಲಿ ಈ ಶುದ್ಧತ್ವ ಪ್ರಾಪ್ತವಾಗುತ್ತದೆ. ಹೀಗೆ ಶುದ್ಧತ್ವವನ್ನು ಹೊಂದುವದರಿಂದಲೇ ಈ ನಲ್ಲಿ ಲಿಂಗದ ಗುಣಗಳು ಪ್ರಕಟವಾಗುತ್ತ ಹೋಗುತ್ತವೆಂದು ವಚನ ರನ ವಿಚಾರಗಳಿವೆ. ಜಗತ್ತಿನಲ್ಲಿ ದುಷ್ಟ ಗುಣಗಳ ಸಂಚಾರವಿದ್ದು ಈ ಗಳು ತನಗೆ ಹತ್ತದಂತೆ ಅವನು ವ್ಯವಹರಿಸತಕ್ಕದ್ದು. ಇದಕ್ಕೋ ಅತ್ಯಂತ ಮನೋದಾರ್ಢ್ಯವು ಅವಶ್ಯವು. ಆಚರಣೆಯಲ್ಲಿ ಪವಿತ್ರತೆಯ ನಡೆದುಕೊಳ್ಳುವದೇ ಇಷ್ಟಲಿಂಗದ ಪ್ರಾಪ್ತಿಯು. ಮತ್ತು ಮನಸ್ಸಿನ ಕಲ ಗಳನ್ನು ಹೋಗಲಾಡಿಸುವದೇ ಪ್ರಾಣಲಿಂಗದ ಪ್ರಾಪ್ತಿಯು ಎಂದು ಹೇ ಲ್ಪಡುತ್ತಿದೆ. ಈ ಪ್ರಕಾರ ವರ್ತಿಸಿದಲ್ಲಿ ಮನುಷ್ಯನಲ್ಲಿ ಲಿಂಗದ ಬೆಳ ಪ್ರಕಾಶಮಾನವಾಗುತ್ತ ಹೋಗುವದು. ಈ ಪ್ರಕಾಶವು ಒಳಗೂ ಹೊರ ವ್ಯಾಪಿಸುವದು. ಮತ್ತು ಕಡೆಗೆ ಅವನು ಈ ಬೆಳಗಿನಲ್ಲಿಯೇ ಏಕಾಕಾರ ಗುವನು. ಇದೇ ಮೋಕ್ಷ ಪದವನ್ನು ಹೊಂದುವ ರೀತಿಯಾಗಿರುತ್ತ ಈ ದೃಷ್ಟಿಯಿಂದ ವಚನಕಾರರು ಷಟ್‌ಸ್ಥಲ ಸಿದ್ಧಾಂತವನ್ನು ನೆಲೆಗೊ ಸಿರುವರು. ಮತ್ತು ಈ ಸಿದ್ಧಾಂತದ ತತ್ವಗಳನ್ನು ಅವರು ತಮ್ಮ ವಚನ ಮೂಲಕ ಸಾರಿರುವರು.

**ವಚನ:—** ೩೪. ಅಯ್ಯಾ, ಲಿಂಗಾಚಾರದ ವಿವರವ ವಿಸ್ತಾರವ ಕರುಣಿಸೆಲೆ ಚಿಕ್ಕದಂಡ ಪ್ರಭುವೆ ಎಂದು ಅಕ್ಕಮಹಾದೇವಿ ಮೊದಲ ಸಕಲ ಪ್ರಮಥಗಣಂಗಳೆಲ್ಲ ಹಸ್ತಾಂಜುಳಿತರಾಗಿ ಬೆಸಗೊಳಲು, ಚಿಕ್ಕದಂಡ ಪ್ರಭುವು ದಂಡನಾಥನ ಕಡೆಗಭಿಮುಖವಾಗಲು ಅವ ಹಸ್ತಾಂಜುಳಿತರಾಗಿ ಬೆಸಗೊಳಲು ಆಗ ಚಿಕ್ಕದಂಡ ಪ್ರಭುವು ಲಿಂಗ

ಆನಂದಜಲ ಉಕ್ಕಿ ಬೋಧಿಸಿದಂಥ ಮಹಾಪ್ರಸಾದ ಉಂಟು. ಅದೆಂತೆಂದೊಡೆ ಕೇಳಿಲೆ ಮರ್ತ್ಯಲೋಕದ ಮಹಾಗಣಂಗಳೆಂದೊರೆದನಂಬಿಗರ ಚೌಡಯ್ಯನು.

ಭಾವ:— ಮನುಷ್ಯನಿಗೆ ಮೋಕ್ಷ ಮಾರ್ಗವನ್ನು ತೋರಿಸಿಕೊಡುವುದೇ ಲಿಂಗಾಚಾರವೆನಿಸಿಕೊಳ್ಳುತ್ತದೆ. ಈ ಲಿಂಗಾಚಾರವನ್ನು ಪೂರ್ಣಸ್ಥಿತಿಗೆ ತಂದವನು ಚನ್ನಬಸವನೆಂಬ ಐತಿಹ್ಯವದೆ. ಅವನು ಈ ವಿಷಯವನ್ನು ಶಿವಾನುಭವ ಮಂಟಪದಲ್ಲಿ ಶಿವಶರಣರಿಗೆ ಬೋಧಿಸುತ್ತಿದ್ದನು. ಈ ಬೋಧೆಯನ್ನೇ ನಾನು ಈಗ ಹೇಳುತ್ತಿದ್ದೇನೆ ಎಂದು ಅಂಬಿಗರ ಚೌಡಯ್ಯನು ಇದರಲ್ಲಿ ಹೇಳಿರುವನು.

ವಚನ:— ೩೫. ಗತಿಪಥದ ಜ್ಞಾನದಲ್ಲಿದ್ದು ನೀಗಿರೋ ನಿಮ್ಮ ಭವಬಂಧನದ ಸಾಗರವನು. ಪ್ರಾಣತ್ಯಾಗವು ಈಗಲೋ ಆಗಲೋ ಯಾವಾಗಲೋ ಎಂದರಿಯಬಾರದು. ರೋಗರುಜಗಳಿಗೆ ಆಗರವು ನಿಮ್ಮ ಒಡಲು. ತನುಮನಪ್ರಾಣವ ನೆಚ್ಚದಿರು. ನಾಗಭೂಷಣನ ಪಾದಪೂಜೆಯ ಮಾಡಿ ಶಿವಯೋಗದಲ್ಲಿ ಲಿಂಗವನೊಡಗೂಡಿ, ಸಾಗಿಹೋಗದವರನು ಭವಗೇಡಿ ಎಂದಾತನೆಮ್ಮ ಅಂಬಿಗರಚೌಡಯ್ಯನು.

ಭಾವ:— ವಚನಕಾರನು ಸಂಸಾರಸಾಗರವನ್ನು ದಾಟಿ ಹೋಗಿರೆಂದು ಈ ವಚನದಲ್ಲಿ ಬೋಧಿಸುತ್ತಾನೆ. ಈ ಪ್ರಯತ್ನವನ್ನು ಮನುಷ್ಯನು ಕೂಡಲೇ ಪ್ರಾರಂಭಿಸತಕ್ಕದ್ದು. ಯಾಕಂದರೆ ಮರಣವು ಅವನಿಗೆ ಎಂದು ಪ್ರಾಪ್ತವಾಗುವದೆಂಬದು ತಿಳಿಯಲಾರದು. ಅದು ಬೇಕಾದಾಗ ಆಕಸ್ಮಿಕ ರೀತಿಯಿಂದ ಬರಬಹುದು. ಮನುಷ್ಯನ ಶರೀರವು ರೋಗರುಜೆಗಳಿಗೆ ತವರುಮನೆಯಾಗಿದ್ದು, ಅದು ಬೇಕಾದಾಗ ಬಿದ್ದುಹೋಗಬಹುದು. ಆದರೆ ಮನುಷ್ಯನು ತನ್ನ ಶರೀರ, ಮನಸ್ಸು, ಮತ್ತು ಪ್ರಾಣ ಇವುಗಳ ಮೇಲೆ ಭರವಸೆಯನ್ನಿಟ್ಟು ವರ್ತಿಸುತ್ತಾನೆ. ಇವೇ ಶ್ರೇಷ್ಠ ವಸ್ತುಗಳೆಂದು ಭಾವಿಸಿ ವರ್ತಿಸುತ್ತಾನೆ. ಹೀಗೆ ನೆಚ್ಚಬೇಡವೆಂದು ವಚನಕಾರನು ಅಂದಿದ್ದಾನೆ. ಆದರೆ ನಾಗಭೂಷಣನ ಪಾದಪೂಜೆಯನ್ನು ಮಾಡಿ, ಶಿವಯೋಗದ ತತ್ವಗಳನ್ನು ತಿಳಿದು ಅದರ ಮೂಲಕ ಲಿಂಗದಲ್ಲಿ ಬೆರೆದು ಹೋಗಬೇಕು. ಹೀಗೆ ವರ್ತಿಸದವರು ಭವಗೇಡಿಗಳೆಂದು ವಚನಕಾರನು ಅಂದಿದ್ದಾನೆ.

ವಚನ:— ೩೬. ಒಡೆಯದೆ ತೆಂಗಾಯಿ ಮೆಚ್ಚುವರುಂಟೆ
ಕಾಯದ ಗುಣ ಕೀಳದೆ ಲಿಂಗವನರಿದವರುಂಟೇ ? ಜೋಡು ಹರಿದ
ದೇಹ ಹರಿಯದು. ಕೈಯ್ಯ ಧೈವ ತಿಳಿದಲ್ಲದೆ ಗುಹೇಶ್ವರ ಲಿಂಗವು ಕಾ
ದೆಂದಾತ ನಮ್ಮ ಅಂಬಿಗರ ಚೌಡಯ್ಯನು.

ಭಾವ:— ಶಿವಯೋಗವನ್ನು ಹ್ಯಾಗೆ ಪ್ರಾರಂಭಿಸಬೇಕೆ
ದನ್ನು ವಚನಕಾರನು ಇದರಲ್ಲಿ ಹೇಳಿರುವನು. ಶಿವಯೋಗವೆಂ
ಏನೇನೂ ಕೆಲಸ ಮಾಡದೆ ಧ್ಯಾನಾಸಕ್ತನಾಗಿರುವದು ಅಲ್ಲ. ಇ
ರಿಂದಲೇ ಪರಮಾತ್ಮನು ದೊರಕಲಾರನು. ತೆಂಗಿನ ಕಾಯೊ
ಸೀಯಾದ ಉದಕ ಮತ್ತು ರುಚಿಕರವಾದ ಕೊಬ್ಬರಿಯನ್ನು ತಿನ್ನಬೇ
ದರೆ ಅದರ ಹೊರಗಿನ ಬಿರಿಸಾದ ಪರಟೆಯನ್ನು ಮೊದಲು ಒಡೆ
ಬೇಕು. ಅದೇ ಪ್ರಕಾರ ಪರಮಾತ್ಮನನ್ನು ಅರಿಯಬೇಕಾದರೆ
ಭವಬಂಧನವೆಂಬ ಕಠಿಣವಾದ ಮತ್ತು ಬಿರಿಸಾದ ಆವರಣವ
ಮೊದಲು ನಾಶಮಾಡತಕ್ಕದ್ದು. ಈ ಆವರಣವೆಂದರೆ ಮನುಷ್ಯ
ಕೀಳ ಗುಣಗಳೇ ಇರುತ್ತವೆ. ಈ ಗುಣಗಳನ್ನು ದೂರ ಮಾ
ಹೊರ್ತು ಲಿಂಗದ ನಿಜಸ್ಥಿತಿಯು ತಿಳಿಯಲಾರದು. ಆದರೆ ಈ ಗು
ಗಳು ನಮ್ಮ ಅಂಗದಲ್ಲಿ ತುಂಬಿ ಹೋಗಿವೆ. ಇವುಗಳ ಸಂಬಂ
ವನ್ನು ಹರಿಯದ ಹೊರ್ತು ದೇಹವು ದೂರಾಗದು. ಇದಕ್ಕೆ ಒಂ
ಸಾಧನವಿದೆ. ಅದು ಯಾವದೆಂದರೆ ಇಷ್ಟಲಿಂಗವನ್ನು ತಿಳಿಯುವ
ಇದೆ. ಇದು ತಿಳಿಯದ ಹೊರ್ತು ಪರಬ್ರಹ್ಮ ಸ್ವರೂಪವು ಗೊತ್ತ
ದೆಂದು ಅಂಬಿಗರ ಚೌಡಯ್ಯನು ಅಂದಿರುವನು.

ವಚನ:— ೩೭. ಸಸಿಗೆ ನೀರನೆರೆದಡೆ ಹಸರಾದಂತೆ, ಬೇರಿನ ಬಾ
ತುಂಬಿ ಸಸಿ ಒಡಲು ತುಂಬಿ ಆ ಎಸಕದ ತೆರನಂತೆ ಇಷ್ಟ ಪ್ರಾಣಯೋ
ವೆಂದನಂಬಿಗ ಚೌಡಯ್ಯ.

ಭಾವ:— ಲಿಂಗವು ಎರಡು ಬಗೆಯಾಗಿವೆ ಎಂದು ವಚನಕಾರ
ಇದರಲ್ಲಿ ಹೇಳಿರುವನು. ಒಂದು ಇಷ್ಟಲಿಂಗವು ಮತ್ತೊಂದು ಪ್ರಾ
ಲಿಂಗವು. ಅವು ಒಂದಕ್ಕೊಂದು ಹೊಂದಿಕೊಂಡು ಇವೆ. ಅವು ಪ
ಸ್ಪರಾವಲಂಬಿಗಳು. ಒಂದರ ಮೇಲೆ ಮತ್ತೊಂದರ ಹೆಚ್ಚುವಿಕೆಯು ಇ
ಹ್ಯಾಗೆ ಬೇರು ಮತ್ತು ಎಲೆ ಇವುಗಳು ಪರಸ್ಪರಾವಲಂಬಿಗಳೋ ಹಾಗೆ
ಈ ಇಷ್ಟಲಿಂಗ ಮತ್ತು ಪ್ರಾಣಲಿಂಗಗಳು ಪರಸ್ಪರಾವಲಂಬಿಗಳು. ಹಸ

ಎಂದರೆ ಎಲೆಗಳನ್ನು ಚಿವುಟಿ ಒಗೆಯುತ್ತ ಹೋದರೆ ಸಸಿಯು ಬದುಕಲಾರದು. ಅದಕ್ಕೆ ಬೇರು ಇದ್ದರೂ ಅದು ಸತ್ತು ಹೋಗುವದು. ಅದರಂತೆಯೇ ಬೇರನ್ನು ಕಿತ್ತು ಒಗೆದರೆ ಸಸಿಯು ಬದುಕಲಾರದು. ಆದರೆ ಸಸಿಗೆ ನೀರು ಹಾಕಿದರೆ ಅದರ ಎಲೆಗಳೂ ಚಿಗಿಯುವವು, ಹಾಗೆಯೇ ಬೇರಿನ ಬಾಯಿಯೂ ತುಂಬುವದು. ಈ ಪ್ರಕಾರ ಎರಡೂ ಸಂವರ್ಧನೆ ಹೊಂದಿ ಸಸಿಯು ಪುಷ್ಟವಾಗುವದು. ಈ ಪ್ರಕಾರ ಮನುಷ್ಯನು ಉತ್ತಮ ಆಚರಣೆ ಎಂಬ ನೀರನ್ನು ಶರೀರಕ್ಕೆ ಹಣಿಸುತ್ತ ಹೋದರೆ, ಅವನಲ್ಲಿರುವ ಇಷ್ಟಲಿಂಗ ಮತ್ತು ಪ್ರಾಣಲಿಂಗ ಇವುಗಳೆರಡೂ ವರ್ಧಿಸುತ್ತ ಹೋಗುವವು. ಅವೆರಡೂ ಪರಸ್ಪರಾವಲಂಬಿಗಳಾಗಿ ಪರಸ್ಪರ ಸಂವರ್ಧನೆ ಮಾಡುತ್ತ ಕಡೆಗೆ ಏಕಾಕಾರವಾಗಿ ಹೋಗುವವು. ಇದೇ ಇಷ್ಟ ಪ್ರಾಣಯೋಗವೆಂದು ವಚನಕಾರನು ಇಲ್ಲಿ ನುಡಿದಿರುವನು.

ವಚನಃ— ೩೮. ಅಂದ ಚಂದವಬಿಟ್ಟು, ಮುಂಡೆ ಬೋಳಾದ ಮತ್ತೆ ಲಿಂಗಕ್ಕೆ ಚಂದ ಅಲಂಕಾರ ಉಂಟೇ ? ತನ್ನಂಗಸಂಗವನರಿಯದೆ ಲಿಂಗ ಸಂಗಿಯಾದೆನೆಂಬ ಭಂಡರ ನಾನೇನೆಂಬೆನೆಂದಾತ ನಮ್ಮ ಅಂಬಿಗರ ಚೌಡಯ್ಯನು.

ಭಾವಃ— ಇಷ್ಟಲಿಂಗ ಮತ್ತು ಪ್ರಾಣಲಿಂಗಗಳು ಹ್ಯಾಗೆ ತನ್ನಲ್ಲಿ ಬರುತ್ತವೆಂಬದನ್ನು ವಚನಕಾರನು ಇದರಲ್ಲಿ ಹೇಳಿರುವನು. ಅನೇಕರು ಜಗತ್ತಿನ ಅಂದ ಚಂದಗಳನ್ನು ಬಿಟ್ಟರೆ, ಲಿಂಗವು ಬರುವದೆಂದು ಹೇಳುತ್ತಾರೆ. ಇದು ತಪ್ಪು. ಹಾಗೆಯೇ ತಲೆಯನ್ನು ಬೋಳಿಸಿಕೊಂಡು ವಿರಕ್ತಾಶ್ರಮವನ್ನು ಹೊಂದಿದರೆ ಲಿಂಗವು ಬರುವದೆಂದು ಹೇಳುವರು. ಇದೂ ತಪ್ಪು. ಲಿಂಗಧಾರಕರಾಗಿ ಆ ಲಿಂಗಕ್ಕೆ ಅನೇಕ ಪರಿ ಪೂಜೆ, ಚಂದಗಳನ್ನೂ ಅಲಂಕಾರಗಳನ್ನೂ ಅಳವಡಿಸುವದರಿಂದ ಲಿಂಗವು ಬರುವದೆಂಬದೂ ತಪ್ಪು. ಆದರೆ ತನ್ನ ಅಂಗದ ಸಂಗವನ್ನು ಅರಿಯಬೇಕೆಂದು ವಚನಕಾರನು ಅಂದಿರುವನು. ಇದು ತಿಳಿದಾಗಲೇ ಲಿಂಗ ಸಂಗಿಯಾಗುವನೆಂದು ಇಲ್ಲಿ ಹೇಳುತ್ತಾನೆ. ಇದಿಲ್ಲದೆ ಹೋಗಿ ಬರೇ ಬಾಹ್ಯ ಆಚರಣೆಗಳಲ್ಲಿ ತೊಡಗಿದರೆ ಅವನು ಭಂಡನೆಂದು ವಚನಕಾರನು ಇದರಲ್ಲಿ ಅಂದಿರುವನು.

ವಚನಃ— ೩೯. ಅಂಗಗುಣವರತು ಲಿಂಗ ಗುಣವನರಿಯಬೇಕೆಂಬರು. ಅಂಗವರತ ಮೇಲೆ ಲಿಂಗಕ್ಕೆ ಕುರುಹುಂಟೆ ? ಅಂಗವೆ

ಲಿಂಗ, ನಿರಂಗವೆ ಸಂಗ. ಈ ಭಾವದಂಗವನರಿಯಬೇಕೆಂದನಂಬ
ಚೌಡಯ್ಯ.

ಭಾವಃ— ಇಲ್ಲಿ ಅಂಗಸಂಗವನ್ನು ಅರಿಯುವದೆಂದರೇನು ಎಂಬದನ್ನು ವಚನಕಾರನು ಹೇಳಿರುವನು. ಅಂಗವನ್ನು ಅರಿಯುವದೆಂದರೆ ಅದನ್ನು ಕ್ಲೇಶಪಡಿಸಿ, ಅದು ತ್ಯಾಜ್ಯವೆಂದು ತಿಳಿದು ವ್ಯವಹರಿಸುವದು ಅಲ್ಲ. ಹೀಗೆ ಮಾಡುವದರಿಂದ ಲಿಂಗದ ಗುಣಗಳು ಬರಲಾರವು. ಯಾಕೆಂದರೆ ಅಂಗವು ನಾಶವಾದ ಬಳಿಕ ಲಿಂಗವೆಂಬದು ಉಳಿಯಲಾರದು. ಲಿಂಗವೆಂಬುದು ಕುರುಹು ಮಾತ್ರ ಇರುತ್ತದೆ. ಅದೊಂದು ಸಾಧನವಾಗುತ್ತದೆ. ಈ ಸಾಧನೆಯಿಂದ ಅಂಗವನ್ನೇ ಲಿಂಗವಾಗಿ ಮಾಡಬೇಕಾಗುತ್ತದೆ. ಆದ್ದರಿಂದ ಅಂಗವನ್ನು ತೊರೆದಲ್ಲಿ ಲಿಂಗವು ಹ್ಯಾಗೆ ಉಳಿಯಬಹುದು! ಈ ಅಂಗದ ಗುಣಗಳನ್ನು ಹೆಚ್ಚಿಸುತ್ತ ಹೆಚ್ಚಿಸುತ್ತ ಹೋದ ಹಾಗೆ ಅದು ಜಡತ್ವವು ಹೊರಟು ಹೋಗುತ್ತದೆ. ಆ ಜಡತ್ವವು ಸರಿಯುತ್ತ ಸ ಯುತ್ತ ಕಡೆಗೆ ಅದು ನಿರಾಕಾರ ವಸ್ತುವಾಗುವದು. ಈ ಸ್ಥಿತಿಯು ಉಂಟಾದಾಗಳೇ ಅದು ಪರಮಾತ್ಮನಲ್ಲಿ ಸಂಬಂಧವಾಯಿತೆಂದು ತಿಳಿಯಬೇಕು. ಈ ಮಾರ್ಗವನ್ನು ಅರಿಯಬೇಕೆಂದು ವಚನಕಾರನು ಹೇಳಿ ವನು.

ವಚನಃ— ೪೦. ಮೋಹಗೂಡದಲ್ಲಿ ಇರಬಲ್ಲುದೇ? ಮುದ್ರೆಯ ವಸ್ತು ಪ್ರಾಣಲಿಂಗಿಯಾಗಬಲ್ಲುದೇ? ಡಾಗಿನ ಪಶುಗಳೆಲ್ಲ ಭೇದವನರಿಯಬಲ್ಲವೇ? ಎಂದಾತ ನಮ್ಮ ಅಂಬಿಗರ ಚೌಡಯ್ಯ.

ಭಾವಃ— ಲಿಂಗವಂತನು ಧರಿಸುವ ಬಾಹ್ಯಲಿಂಗವು ಒಂದು ಚಿನ್ಹೆವಾಗಿ ಮಾತ್ರವಿದೆ. ಹ್ಯಾಗೆ ಮುದ್ರೆಯನ್ನು ಒತ್ತಿದರೆ, ಪದಾರ್ಥವು ಇಂತಹದೆಂದು ತಿಳಿಯಲಿಕ್ಕೆ ಆಸ್ಪದವಾಗುತ್ತದೋ ಹಾಗೆಯೇ ಈ ಚಿನ್ಹೆವಿರುತ್ತದೆ. ಆದರೆ ಪರಮಾತ್ಮನಲ್ಲಿ ನಿಜವಾದ ಮೋಹವಿರಬೇಕು. ಅದೇ ಲಿಂಗದ ಬರುವಿಕೆಯ ಕುರುಹು. ಅದೇ ಮುಂದೆ ಪ್ರಾಣಲಿಂಗವೆನಿಸುವದು. ಆದರೆ ಬರೇ ಮುದ್ರೆಯ ವಸ್ತು ಪ್ರಾಣಲಿಂಗಿಯಾಗಬಲ್ಲುದೇ? ದೇವರಿಗೆ ಬಿಟ್ಟ ಗೂಳಿಗಳಿಗೆ ಲಿಂಗಮುದ್ರೆಯನ್ನು ಒತ್ತುವದುಂಟು. ಆದರೆ ಆ ಪಶುಗಳಿಗೆ ಈ ಮುದ್ರೆ ಏನೆಂಬುದು ತಿಳಿಯುವದೇ? ತಾವು ಪರಮಾತ್ಮನಿಗೆ ಸಂಬಂಧಿಸಿದ ಪ್ರಾಣಿಗಳೆಂಬ ತಿಳುವ

